ನನ್ನ ಜನ್ಮದಿನಕ್ಕೊಂದು
ಹೊಸ ಪುಸ್ತಕ

ಅದೊಂದು
**ಯೂಕೊಬ್ಯಾಂಕ್**
ಪಾಸ್ ಬುಕ್



ಹಲವಾರು ಉಪಹಾರಗಳನ್ನು ತರಬಲ್ಲ ಒಂದು ಉಪಹಾರ. ಅದು ಯಾವುದು ಗೊತ್ತೇ? ನನ್ನ ಯೂಕೊಬ್ಯಾಂಕ್ ಪಾಸ್ ಬುಕ್

ಅಮ್ಮಾ, ನಿನ್ನ ಈ ಸುವಿಚಾರಕ್ಕಾಗಿ 'ಧನ್ಯವಾದಗಳು'. ನನ್ನ ಅಲ್ಪ ಉಳಿತಾಯವನ್ನು ಬಹುಗುಣವಾಗಿಸಿದ್ದಕ್ಕೆ ಯೂಕೊಬ್ಯಾಂಕ್, "ನಿನಗೂ ಧನ್ಯವಾದಗಳು."

UCO/CAS-69/80 KAN




**ಯುನ್ಯಾಟೆಡ್ ಕಮರ್ಶಿಯಲ್ ಬ್ಯಾಂಕ್**
ಅಕ್ಕಪಕ್ಕದಲ್ಲಿರುವ ಸೌಕರ್ಯ ನೀಡುವ ಬ್ಯಾಂಕ್



Cadbury
GEMS








**Results of Chandamama—Camlin Colouring Contest No. 21 (Kannada)**

*1st Prize:* Akram N., Bangalore-28. *2nd Prize:* Kumarshwami S. M. Nidagundi. *3rd Prize:* M. R. Sreenath, Hassan. *Consolation Prizes:* Rajesh Kumar, Dodballapur-561 203; A. S. Prabhakara Bhat, Sampaje-574 234; Rajesh R. Hoskote, Bijapur-1; C. Subramanya, Mysore-9; K. S. Thirunavukaras, Bangalore-28.

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


**ಲಾ**ಟರಿಗಳನ್ನು ಕೊಂಡು ಕೊಂಡು ಅದೃಷ್ಟವನ್ನು ಹೊಂಚು ಹಾಕುವುದಕ್ಕೂ ಆಕಸ್ಮಿಕವಾಗಿ ತಾನಾಗಿ ಬರುವ ಅದೃಷ್ಟಕ್ಕೂ ವ್ಯತ್ಯಾಸವಿದೆ. ಲಾಟರಿಗಳು ಮಾನವಕಲ್ಪಿತವಾಗಿ ಮಾಡುವ ಅದೃಷ್ಟದ ದಾರಿ. ಅಂತಹುದೇನಿಲ್ಲದೆ ಆಕಸ್ಮಿಕವಾಗಿ ಬರುವಂತಹುದು ನಿಜವಾದ ಅದೃಷ್ಟ. ಈ ಸಂಚಿಕೆಯಲ್ಲಿರುವ "ಉದಾಸೀನದ ಶೀನ" ನಿಗೆ ತಾನಾಗಿ ಬರುವ ಅದೃಷ್ಟವನ್ನೂ ಅನುಭವಿಸುವ ಯೋಗವು ತಪ್ಪಿಹೋಗುತ್ತದೆ. ಯಾವ ಅದೃಷ್ಟ ಬಂದರೂ ಉದಾಸೀನವಾಗಿರುವವರಿಗೆ ದಕ್ಕಲಾರದು.

## ಅಮರವಾಣಿ

ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ
ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ.

ಶೂರನು ನೂರಕ್ಕೆ ಒಬ್ಬನಾಗಿ, ಪಂಡಿತನು ಸಾವಿರಕ್ಕೊಬ್ಬನಾಗಿ, ಮಾತಿನಜಾಣ ಹತ್ತು ಸಾವಿರಕ್ಕೊಬ್ಬನಾಗಿ ಇರಬಹುದು. ದಾತನು ಹತ್ತು ಸಾವಿರಕ್ಕೊಬ್ಬನಾದರೂ ಇರುವುದು ಕಷ್ಟ.


ಸಂಪುಟ : ೬೭ ಡಿಸೆಂಬರ್ '೮೧ ಸಂಚಿಕೆ : ೬

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦





CHITRA



# ಅರ್ಹನಾದ ರಾಯಭಾರಿ

ಒಂದು ಕಾಲದಲ್ಲಿ ಮದ್ರದೇಶವನ್ನು ಪ್ರಚಂಡ ಮಹಾರಾಜನು ಆಳಿಕೊಂಡಿದ್ದಾಗ, ಅವನ ಸೈನಿಕ ಬಲವೂ, ಸಾಧನ ಸಂಪತ್ತುಗಳೂ ಚೆನ್ನಾಗಿ ಬೆಳೆದು ಹೆಸರಿಗೆ ತಕ್ಕಂತೆ ಪ್ರಚಂಡನೆನಿಸಿದನು. ಅವನು ಸುತ್ತು ಮುತ್ತಲಿನ ರಾಜರೊಂದಿಗೆ ಸ್ನೇಹ ಸಂಬಂಧಗಳನ್ನು ಬೆಳೆಸಿಕೊಳ್ಳಲಿಕ್ಕಾಗಿ ರಾಯಭಾರಿಗಳನ್ನು ಕೂಡಾ ನಿಯಮಿಸಿಕೊಂಡಿದ್ದನು.

ಆಗ ಅವನು ನಿಯಮಿಸಿದ ರಾಯಭಾರಿಗಳಲ್ಲಿ ವಜ್ರಸೇನನೆಂಬವನು ಬಹಳ ಸಮರ್ಥನು, ವಜ್ರಸೇನನು ಅನೇಕ ವರ್ಷಗಳಿಂದ ತನ್ನ ಸಮರ್ಥತೆಯ ರಾಯಭಾರವನ್ನು ನಿರ್ವಹಿಸಿ, ಆಕಸ್ಮಾತ್ತಾಗಿ ಹೇಗೋ ಕುದುರೆಯ ಮೇಲಿನಿಂದ ಕೆಳಗೆ ಬಿದ್ದು ಅಕಾಲ ಮರಣಕ್ಕೆ ತುತ್ತಾದನು.

ಪ್ರಚಂಡ ಮಹಾರಾಜನು ವಜ್ರಸೇನನ ಸ್ಥಾನದಲ್ಲಿ ಮತ್ತೊಬ್ಬ ರಾಯಭಾರಿಯನ್ನು ನಿಯಮಿಸಬೇಕಾಯಿತು. ಅದಕ್ಕೆ ಅರ್ಹರಾದವರನ್ನು ನಿಯಮಿಸಲು ಕೆಲವಾರು ಪರೀಕ್ಷೆಗಳನ್ನು ಇಟ್ಟದ್ದೂ ಆಯಿತು. ಆ ಪರೀಕ್ಷೆಗಳಲ್ಲಿ ಲಲಿತಾಂಗ ಮತ್ತು ವೀರಾಂಗ ಎಂಬವರಿಬ್ಬರು ಉತ್ತೀರ್ಣರಾದರು. ಇನ್ನು ಆ ಇಬ್ಬರಲ್ಲಿ ರಾಯಭಾರೀ ಪದವಿಗೆ ಯಾರು ತಕ್ಕವರೆಂಬ ಕೊನೆಯ ಪರೀಕ್ಷೆ ಮಾತ್ರ ಉಳಿಯಿತು.

ರಾಜನು ಅದಕ್ಕಾಗಿ ಒಂದು ಪರೀಕ್ಷೆ ಇಡುತ್ತ, ಅವರಿಬ್ಬರೊಂದಿಗೆ, "ಈಗ ನಾನು ನಿಮ್ಮ ಮೇಲೆ ಬಹಳ ಮುಖ್ಯವಾದ ಬಾಧ್ಯತೆಯನ್ನು ಒಪ್ಪಿಸುತ್ತೇನೆ" ಎಂದು ಹೇಳಿ ವೀರಾಂಗನೊಂದಿಗೆ, "ನೀನು ಈ ದಿನವೇ ಹೊರಟು ಕೌಶಾಂಬೀ ರಾಜ್ಯಕ್ಕೆ ಹೋಗಿ, ಆ ರಾಜನೊಂದಿಗೆ ಮಾತಾಡಿ ಎಂಥವನೆಂದು ತಿಳಿದು ಸ್ನೇಹ ಸಂಧಿಯ ಒಪ್ಪಂದವನ್ನು ಮಾಡಿಕೊಂಡು, ನಾವು ಕೊಡುವ ಕಾಣಿಕೆಗಳನ್ನು ಆತನಿಗೆ ಕೊಟ್ಟು ಬರಬೇಕು. ಇದಕ್ಕೆ ಅಗತ್ಯವಾದ ಪರಿವಾರದವರೂ ನಿನ್ನೊಂದಿಗೆ ಬರುತ್ತಾರೆ" ಎಂದನು.

ಇದೇ ವಿಧವಾಗಿ ಲಲಿತಾಂಗನು ವಿದೇಹ ರಾಜ್ಯಕ್ಕೆ ಹೋಗಿ ಆ ರಾಜನಿಗೆ ಕಾಣಿಕೆಗಳನ್ನು ಕೊಟ್ಟು ಸ್ನೇಹ ಸಂಧಿ ಮಾಡಿಕೊಂಡು ಬರಬೇಕೆಂದೂ ಹೇಳಿದನು.

ಲಲಿತಾಂಗ, ವೀರಾಂಗರಿಬ್ಬರಿಗೂ, ಅವೆರಡೂ ಪರಿಚಯವಿಲ್ಲದ ರಾಜ್ಯಗಳು. ದಾರಿಗಳೂ ಬೇರೆ ಬೇರೆ. ರಾಜನ ಆಜ್ಞೆಯಂತೆ ವೀರಾಂಗನು ತನ್ನೊಂದಿಗೆ

ಬಿ. ಎ. ರಾವು

ಕೊಟ್ಟ ಪರಿವಾರದೊಂದಿಗೆ ಕೌಶಾಂಬಿಗೆ ಹೊರಟನು. ಲಲಿತಾಂಗನು ವಿದೇಹ ರಾಜ್ಯಕ್ಕೆ ಪ್ರಯಾಣ ಮಾಡಿದನು. ಅವರಿಬ್ಬರೂ ಎಷ್ಟು ದಿನಗಳಲ್ಲಿ ಹಿಂದಿರುಗಿ ಬರಬೇಕೆಂದು ಕೂಡಾ ಪ್ರಚಂಡ ರಾಜನು ಹೇಳಿದ್ದನು.

ಲಲಿತಾಂಗನು ನಿರ್ಣಯಿಸಲ್ಪಟ್ಟ ಗಡುವಿಗಿಂತಲೂ ಮೊದಲೇ ಹಿಂದಿರುಗಿ ಬಂದು ಬಿಟ್ಟನು, ಅವನೊಂದಿಗೆ ಒಯ್ಯಲ್ಪಟ್ಟ ಕಾಣಿಕೆಗಳು ಕೂಡಾ ಹಾಗೆಯೇ ಹಿಂದಿರುಗಿದ್ದುವು. ತನ್ನೊಂದಿಗಿನ ಪರಿವಾರದೊಂದಿಗೆ ಹೋದಹಾಗೆಯೇ ತಿರುಗಿ ಬಂದ ಲಲಿತಾಂಗನನ್ನು ನೋಡಿ ರಾಜನು,

"ಇದೇನು ? ಕಾಣಿಕೆಗಳನ್ನು ವಿದೇಹರಾಜನು ನಿರಾಕರಿಸಿದನೇನು ? ಅವನೊಂದಿಗೆ ಸಂಧಿ ಕುದುರ ಲಿಲ್ಲವೇ ?" ಎಂದು ಕೇಳಿದನು.

"ಮಹಾರಾಜರೇ, ಆ ಸಾಮಂತ ರಾಜನೊಂದಿಗೆ ಸ್ನೇಹ ಸಂಧಿಗೆ ಅರ್ಥವೇನೂ ಕಾಣುವುದಿಲ್ಲ. ಹಾಗೆ ಮಾಡಿದರೆ ನಮ್ಮ ಸಾರ್ವಭೌಮತೆಗೆ ಕುಂದು ಬರುವುದಿಲ್ಲವೆ ? ಅಲ್ಲಿಗೆ ಹೋಗುವಾಗ ಈ ಸಂಗತಿ ನನಗೆ ಗೊತ್ತಾಗಲಿಲ್ಲ. ವಿದೇಹರಾಜನನ್ನು ನೋಡಿ ಕುಶಲ ವಿಚಾರಗಳನ್ನು ಮಾತಾಡುವಾಗ ಆ ಸಂಗತಿ ಗೊತ್ತಾಯಿತು. ಆದುದರಿಂದ ಕಾಣಿಕೆಗಳನ್ನೇನೂ ಕೊಡದೆ, ಸ್ನೇಹ ಸಂಧಿಯ ವಿಷಯ ಕೂಡಾ ಪ್ರಸ್ತಾವಿಸದೆ ಸುಮ್ಮನೆ ಹಿಂದಿರುಗಿ ಬಂದು ಬಿಟ್ಟೆನು" ಎಂದನು ಲಲಿತಾಂಗ.

ಅವನು ಹೇಳಿದುದನ್ನು ಕೇಳಿ ರಾಜನೇನೂ ಆಶ್ಚರ್ಯ ಪಡದಿದ್ದರೂ, ಸಭೆಯಲ್ಲಿದ್ದವರೆಲ್ಲ ಅತ್ಯಾಶ್ಚರ್ಯಪಟ್ಟರು. ಮಹಾರಾಜರು ಸ್ನೇಹ ಸಂಧಿ ಮಾಡಿಕೊಂಡು ಬರಲು ಹೇಳಿದರೆ, ಅದಕ್ಕೆ ವ್ಯತಿರೇಕವಾಗಿ ಪ್ರವರ್ತಿಸಿದ ಲಲಿತಾಂಗನು ರಾಯಭಾರಿ ಪದವಿಗೆ ಅನರ್ಹನೆಂದೇ ರಾಜನು ನಿರ್ಣಯಿಸುವನೆಂದು ಎಲ್ಲರೂ ಅಂದುಕೊಂಡರು.

ರಾಜನು ನಿರ್ಣಯಿಸಿದ ಗಡು ಮುಗಿದು ಎರಡು ದಿನಗಳ ಮೇಲೆ, ಕೌಶಾಂಬೀರಾಜನು ಕೊಟ್ಟ ಕಾಣಿಕೆ ಗಳನ್ನು ಸಾಗಿಸಿಕೊಂಡು ವೀರಾಂಗನು ತಿರುಗಿ



ಬಂದನು. ಆಗ ಸಭೆ ನಡೆಸಿಕೊಂಡಿದ್ದ ರಾಜನು ವೀರಾಂಗನನ್ನು ನೋಡಿ. "ಗಡುದಾಟಿ ನಿಧಾನ ವಾಗಿ ಬಂದೆಯಲ್ಲಾ ? ಕೌಶಾಂಬೀರಾಜನು ಸ್ನೇಹದ ಸಂಧಿಗೆ ಒಪ್ಪಿಕೊಂಡಿರುವನೇ ?" ಎಂದು ಕೇಳಿದನು.

ವೀರಾಂಗನು ವಿಜಯದ ಹೆಮ್ಮೆಯಿಂದ ಉಬ್ಬುತ್ತ, "ಅದಕ್ಕೇನು ಸಂದೇಹ ಪ್ರಭುಗಳೇ, ನನ್ನ ಮಾತುಗಳ ಚಮತ್ಕಾರಕ್ಕೆ ಕೌಶಾಂಬಿರಾಜನು ಮೆಚ್ಚಿ ಮುಗ್ಧನಾದನು. ಮಹಾರಾಜರೆ, ನಾನು ಅವನನ್ನು ನಮ್ಮ ಸ್ನೇಹ ಸಂಬಂಧಕ್ಕೆ ಒಪ್ಪಿಸಿ ಬಿಟ್ಟೆನು. ಅದಕ್ಕೆ ಗುರುತಾಗಿ ಆತನು ನಮ್ಮ ಕಾಣಿಕೆ ಗಳನ್ನು ಸ್ವೀಕರಿಸಿ, ಬೆಲೆದಾಳುವಂಥ ಕಾಣಿಕೆ ವಸ್ತು ಗಳನ್ನು ನಮಗೂ ಕೊಟ್ಟದ್ದು ಮಾತ್ರವಲ್ಲದೆ, ದಾಸದಾಸಿಯರನ್ನು ಕೂಡಾ ಬಹುಮಾನವಾಗಿ ಕಳಿಸಿದ್ದಾನೆ. ನನ್ನನ್ನು ತನ್ನ ಅತಿಥಿಯಾಗಿರಬೇಕೆಂದು ಒತ್ತಾಯಿಸಿ ಎರಡು ದಿನ ಹೆಚ್ಚಾಗಿ ಕುಳ್ಳಿರಿಸಿ ಕೊಂಡನು" ಎಂದನು.

ಸಭಿಕರು ಸಂತೋಷದಿಂದ ವೀರಾಂಗನನ್ನು ಅಭಿನಂದಿಸಬೇಕೆಂದೂ ಬಾಯಿ ತೆರೆಯುವಾಗ, ರಾಜನು ಕೈ ಸನ್ನೆಯಿಂದ ಸುಮ್ಮನಿರಿಸಿ, "ರಾಯಭಾರಿ ಯಾಗಿ ಲಲಿತಾಂಗನನ್ನೇ ನಿಯಮಿಸುತ್ತೇನೆ. ಇದು ನಿಮ್ಮಲ್ಲಿ ಬಹಳ ಮಂದಿಗೆ ಆಶ್ಚರ್ಯಘನಿಸಬಹುದು. ಆದರೆ ಲಲಿತಾಂಗನು ಮಾಡಿದುದೇ ಸರಿಯಾದ ಪದ್ಧತಿ. ವಿದೇಹವು ನಮ್ಮ ತಂದೆಯಕಾಲದಿಂದಲೂ ನಮಗೆ ಸಾಮಂತರಾಜ್ಯ. ಅಂತಹ ರಾಜ್ಯದೊಂದಿಗೆ ನಾವು ಸ್ನೇಹ ಸಂಬಂಧ ಮಾಡಿಕೊಳ್ಳುವ ಅಗತ್ಯವೇನೂ ಇಲ್ಲ. ಮೊದಲು ಈ ಸಂಗತಿ ತಿಳಿಯದೆ ಹೋದರೂ ಲಲಿತಾಂಗನು ಆ ರಾಜ್ಯವನ್ನು ತಲಪಿದ ಮೇಲೆ ವಿಷಯವನ್ನು ತಿಳಿದುಕೊಂಡು, ಆ ರಾಜನಿಗೆ ಕಾಣಿಕೆ ಕೊಡದೆ, ಸ್ನೇಹದ ಸಂಧಿಯ ಮಾತನ್ನೂ ಎತ್ತದೆ ತಿರುಗಿ ಬಂದಿದ್ದಾನೆ.

"ಕೌಶಾಂಬಿ ಕೂಡಾ ನಮ್ಮ ಸಾಮಂತರಾಜ್ಯವೇ, ವೀರಾಂಗನು ಈ ಸತ್ಯವನ್ನು ತಿಳಿಬುಕೊಳ್ಳಲು ಪ್ರಯತ್ನಿಸದೆ, ಕೌಶಾಂಬಿಯವನು ಸ್ವತಂತ್ರ ರಾಜ ನೆಂಬಂತೆ ವರ್ತಿಸಿ ಅವಸರಪಟ್ಟು ಆ ರಾಜನಿಗೆ ಕಾಣಿಕೆ ಕೊಟ್ಟಿದ್ದಾನೆ. ಅರ್ಥವಿಲ್ಲದ ಸ್ನೇಹ ಸಂಧಿ ಮಾಡಿದ್ದಾನೆ. ರಾಯಭಾರಿಗೆ ಅಗತ್ಯವಾದ ಸಮಯ ಸ್ಫೂರ್ತಿ ಅವನಲ್ಲಿ ಇಲ್ಲ, ಅಂತಹವನ ರಾಯಭಾರಿ ತನದಲ್ಲಿ ಮದ್ರದೇಶದ ಗೌರವವು ಉಳಿಯುವುದು ಕಷ್ಟ" ಎಂದನು ಪ್ರಚಂಡ ಮಹಾರಾಜ.

ಈಗ ಸಭಿಕರಿಗೆಲ್ಲಾ ರಾಜನ ಮಾತು ಅರ್ಥ ವಾಯಿತು. ಲಲಿತಾಂಗನು ಎಷ್ಟು ದೊಡ್ಡ ವಿವೇಕ ವಂತನೆಂದು ಗೊತ್ತಾಗಿ ತಲೆದೂಗಿದರು. ಗತಿಸಿದ ವಜ್ರಸೇನನಷ್ಟು ಸಮರ್ಥನಾಗಿ ಲಲಿತಾಂಗನು ಬರಬಲ್ಲನೆಂದು ಎಲ್ಲರಿಗೂ ತೋರಿತು.







# ಘಾತಕರ ಭಂಗ

ಹಿಂದೆ ಕುಂತಲದೇಶವನ್ನು ಆಳಿಕೊಂಡಿದ್ದ ರವಿವರ್ಮ ರಾಜನ ಆಸ್ಥಾನದಲ್ಲಿ ಕೋಶಾಧಿಕಾರಿ ಪದವಿಯೊಂದು ಖಾಲಿಯಾಯಿತು. ಆ ಪದವಿಗೆ ತಕ್ಕವನಾರೆಂದು ರಾಜನು ಆಲೋಚನೆ ಮಾಡುವ ಸಂಗತಿ ರಾಣಿಗೆ ಗೊತ್ತಾಯಿತು, ಅವಳು ಆ ದೊಡ್ಡ ಪದವಿಯನ್ನು ತನ್ನ ತಮ್ಮನಿಗೆ ಕೊಡಿಸಬೇಕೆಂಬ ಉದ್ದೇಶವುಳ್ಳವಳಾಗಿ, ರಾಜನೊಂದಿಗೆ ಅವನ ಗುಣಗಳನ್ನು ಕುರಿತು ಹೊಗಳುತ್ತ, "ಕೋಶಾಧಿಕಾರವೆಂದರೆ ಹಣದ ನಡುವಿನ ಕೆಲಸ. ನಮ್ಮವನೇ ಇದ್ದು ಬಿಟ್ಟರೆ ನಂಬುಗೆಯಾಗಿರುತ್ತಾನೆ" ಎಂದಳು.

ರಾಜನಿಗೆ ಅದು ಇಷ್ಟವಿರಲಿಲ್ಲ. ನಾಳೆ ಧನಾಗಾರದ ಲೆಕ್ಕದಲ್ಲಿ ಹೆಚ್ಚು ಕಡಿಮೆಗಳು ಬಂದರೆ, ಬಾವ ಮೈದುನನೊಂದಿಗೆ ತಕರಾರು ಮಾಡಬೇಕಾಗಿ ಬಂದೀತಪ್ಪೆ? ಹೀಗೆ ಯೋಚಿಸಿ ರಾಜನು, "ನೋಡುತ್ತೇನೆ" ಎಂದಷ್ಟೇ ಹೇಳಿ ಸುಮ್ಮನಾದನು.

ಮಾರಣೇ ದಿನ ಸೇನಾಧಿಪತಿ ರಾಜನನ್ನು ಸಂಧಿಸಿ, "ಮಹಾರಾಜರೇ, ನನ್ನ ತಮ್ಮನು ಚೆನ್ನಾಗಿ ಓದಿಕೊಂಡಿದ್ದಾನೆ. ಆದರೆ ಅವನಿಗೆ ಯುದ್ಧ ವಿದ್ಯೆಗಳಾವುದೂ ಹಿಡಿಸಲಿಲ್ಲ. ತಾವು ಅವನಿಗೆ ಕೋಶಾಧಿಕಾರಿ ಪದವಿಯನ್ನು ದಯಪಾಲಿಸಿದರೆ, ಸೇನಾಧಿಪತಿಯಾಗಿ ನಾನೂ, ಕೋಶಾಧಿಕಾರಿಯಾಗಿ ಅವನೂ ತಮಗೆ ಸೇವೆ ಮಾಡುವ ಭಾಗ್ಯ ಇನ್ನಷ್ಟು ಬಲವಾಗುತ್ತದೆ" ಎಂದನು.

ರಾಜನಿಗೆ ಅದೂ ಇಷ್ಟವೆನಿಸಲಿಲ್ಲ. ಅಣ್ಣನು ಸೇನಾಧಿಪತಿಯಾಗಿಯೂ, ತಮ್ಮನು ಕೋಶಾಧಿಕಾರಿಯಾಗಿಯೂ ಇದ್ದು ಬಿಟ್ಟರೆ, ಆಸ್ಥಾನದಲ್ಲಿ ಅವರಿಗೆ ಯಾವ ಹಂಗೂ ಇಲ್ಲದಂತಾದೀತು. ಅದರ ಮೇಲೆ ಸೈನ್ಯವನ್ನೂ, ಧನವನ್ನೂ ಇಬ್ಬರು ಸೋದರರ ವಶಕ್ಕೆ ಕೊಟ್ಟಹಾಗೇಸರಿ. ಅದು ತುಂಬಾ ಅಪಾಯ!

ಯೋಚಿಸಿ ಹೇಳುತ್ತೇನೆಂದು ರಾಜನು ಅವನನ್ನು ಕಳುಹಿಸಿಬಿಟ್ಟನು. ಹೀಗಿರುವಾಗ ವಿಷ್ಣುಶರ್ಮನೆಂಬ ಯುವಕನು ರಾಜದರ್ಶನಕ್ಕೆ ಬಂದು, "ಮಹಾಪ್ರಭುಗಳೇ. ನಾನು ಗಣಿತಶಾಸ್ತ್ರದಲ್ಲಿ ಹೇಳಿಕೊಳ್ಳುವಷ್ಟು ಪ್ರಾವೀಣ್ಯತೆ ಸಂಪಾದಿಸಿದ್ದೇನೆ. ತಾವು ನನ್ನನ್ನು ಪರೀಕ್ಷಿಸಿ ಆಸ್ಥಾನದಲ್ಲಿ ಏನಾದರೊಂದು ಉದ್ಯೋಗ ಕೊಡಿಸಬೇಕೆಂದು ಪ್ರಾರ್ಥನೆ" ಎಂದನು.

ರವಿವರ್ಮರಾಜನು ವಿಷ್ಣುಶರ್ಮನನ್ನು ಅನೇಕ ವಿಧವಾಗಿ ಪರೀಕ್ಷಿಸಿ ತೃಪ್ತನಾಗಿ, ಅವನನ್ನೇ

ಬಿ. ಎನ್. ಸ್ವಾಮಿ

ಕೋಶಾಧಿಕಾರಿ ಪದವಿಗೆ ನಿಯಮಿಸಿದನು. ರಾಜನು ಹೀಗೆ ಯಾವನೋ ಒಬ್ಬನನ್ನು ನಿಯಮಿಸಿದುದನ್ನು ನೋಡಿ ರಾಣಿಯೂ, ಸೇನಾಧಿಪತಿಯೂ, ಕರುಬಿ ಕೋಪಗೊಂಡರು. ಕೆಲವು ದಿನಗಳು ಕಳೆದ ಮೇಲೆ ರಾಣಿ ರಾಜನೊಂದಿಗೆ, "ನೀವು ಕೋಶಾಧಿಕಾರಿಯಾಗಿ ನಿಯಮಿಸಿದ ವಿಷ್ಣು ಶರ್ಮನು ಬಹಳ ಯೋಗ್ಯನೆಂದೂ, ನಂಬುಗೆಗೆ ತಕ್ಕವನೆಂದೂ ನೀವು ತಿಳಿದದ್ದು ಸುಳ್ಳಾಗಿಹೋಯಿತು. ಅವನೊಬ್ಬ ಲಂಚಖೋರ. ಈ ದಿನ ಸ್ವಲ್ಪ ಮೊದಲು ಉದ್ಯೋಗ ಕೇಳಿ ಬಂದ ಒಬ್ಬನಿಂದ ಸಾವಿರ ವರಹಗಳನ್ನು ಲಂಚ ತೆಗೆದುಕೊಂಡಿದ್ದಾನೆಂದು ನನಗೆ ಗೊತ್ತಾಗಿದೆ. ಬೇಗನೇ ಪರೀಕ್ಷೆ ಮಾಡಿಬಿಡಿ. ಅವನು ಮನೆಗೆ ಹೋಗುವಾಗ ಆ ಹಣವನ್ನು ತೆಗೆದುಕೊಂಡು ಹೋಗಿಬಿಡುತ್ತಾನೆ. ಈಗಲೇ ನೀವು ಹೋಗಿ ಪರೀಕ್ಷೆ ಮಾಡಿಬಿಟ್ಟರೆ ಕೋಶಾಗಾರದಲ್ಲಿರ ಬೇಕಾದ ಮೊತ್ತಕ್ಕಿಂತ ಸಾವಿರ ವರಹ ಹೆಚ್ಚಾಗಿರಲೇ ಬೇಕು" ಎಂದಳು.

ಆ ಮಾತು ಕೇಳಿ ರಾಜನು ಆಗಿಂದಾಗಲೇ ಕೋಶಾಗಾರಕ್ಕೆ ಹೋಗಿ ಅಲ್ಲಿರುವ ಧನದ ಲೆಕ್ಕವನ್ನು ಪರೀಕ್ಷಿಸಿ ನೋಡಿದನು. ಇರಬೇಕಾದುದಕ್ಕಿಂತ ಒಂದು ಚಿಕ್ಕಾಸೂ ಹೆಚ್ಚಿಗಿರಲಿಲ್ಲ. ವಿಷ್ಣುಶರ್ಮನನ್ನು ಶೋಧಿಸಿದರೂ ಅಂತಹುದೇನೂ ಕಂಡುಬರಲಿಲ್ಲ.

ರಾಜನು ಸಂತೃಪ್ತನಾಗಿ, ಹೀಗೆ ನಡೆದುದರ ಕಾರಣವನ್ನು ತರುವಾಯ ಹೇಳುವೆನೆಂದು, ಆಶ್ಚರ್ಯದಿಂದ ನೋಡುವ ವಿಷ್ಣುಶರ್ಮನಿಗೆ ಹೇಳಿ, ಅಲ್ಲಿಂದ ಹೊರಟುಹೋದನು.

ಈ ಸಮಾಚಾರವು ಹೊಂಚು ಹಾಕಿಕೊಂಡಿದ್ದ ದಾಸಿಯ ಮೂಲಕವಾಗಿ ರಾಣಿಗೆ ತಿಳಿಯಿತು. ರಾಣಿ ತನ್ನ ನಂಬುಗೆಯ ದಾಸಿಯ ಮೂಲಕ ಕೋಶಾಗಾರದಲ್ಲಿ ಸಾವಿರ ವರಹಗಳ ಮೂಟೆ ಇರಿಸಿದ್ದಳು. ಅದು ಹೇಗೆ ಮಾಯವಾಯಿತೆಂದು ತಿಳಿಯದೆ ರಾಣಿ ಮೂಗಿಗೆ ಬೆರಳಿಟ್ಟಳು.

ಸೇನಾಧಿಪತಿಗೆ ಕೂಡಾ ಭಾರಿ ಅನುಮಾನವೊಂದು ಉಂಟಾಯಿತು. ಅವನು ತುಂಬಾ ನಂಬುಗೆಯ ನೌಕರನ ಮೂಲಕ ಕೋಶಾಗಾರದಿಂದ ಸಾವಿರ ವರಹಗಳ ಮೂಟೆಯನ್ನು ಕಳವು ಮಾಡಿಸಿದ್ದನು. ಆದರೂ ಅಲ್ಲಿ ಇರಬೇಕಾದ ಹಣದ ಲೆಕ್ಕದಲ್ಲಿ ವ್ಯತ್ಯಾಸಬರಲಿಲ್ಲವೇಕೆ? ಇದು ಅವನಿಗೂ ಅರ್ಥವಾಗದೆ ಮಿಕಿಮಿಕಿಗೊಂಡನು.

ಈ ವಿಧವಾಗಿ ಇಬ್ಬರು ಅಸೂಯೆಯ ಘಾತಕರು ಒಬ್ಬ ನೀತಿವಂತನಿಗೆ ಕೇಡು ಬಗೆಯಲು ಹೋಗಿ, ತಮ್ಮ ದುಷ್ಟಪಥಕ ತಮ್ಮ ತಲೆಗೇ ಹೊಡೆದಂತೆ, ಕನ್ನದೊಳಗೆ ಚೇಳಿನ ಚುಚ್ಚುಂಡ ಕಳ್ಳರ ಹಾಗೆ ಕಿಂಕಂ ಎನ್ನದೆ ಸುಮ್ಮನಾದರು.






ವಿಸ್ತಾರವಾದ ಸಮುದ್ರದಲ್ಲಿ ಹರಡಿರುವ ಅನೇಕಾನೇಕ ದ್ವೀಪಗಳಲ್ಲಿ ಮರಾಳದ್ವೀಪವು ದೊಡ್ಡದಾಗಿದ್ದಿತು. ಅಲ್ಲಿಯ ರಾಜನಾದ ಮಂದರದೇವನು ಉತ್ತಮವಾದ ಪರಿಪಾಲನೆಯಿಂದ ಪ್ರಜೆಗಳಿಗೆ ಪ್ರಿಯನಾಗಿದ್ದನು.

ಒಂದು ದಿನ ಮಂದರದೇವರಾಜನು ಉದ್ಯಾನದಲ್ಲಿ ವಿಹರಿಸಿಕೊಂಡಿದ್ದನು. ನಿಶ್ಚಿಂತನಾದ ರಾಜನು ವಿರಾಮ ವೇಳೆಯಲ್ಲಿ ಹೀಗೆ ತಿರುಗಾಡುವ ಪದ್ಧತಿಯಿದ್ದಿತು. ಈಗ ಒಮ್ಮಿಂದೊಮ್ಮೆ ಅವನ ವಿಹಾರಕ್ಕೆ ವಿಘ್ನ ಬಂತು. ಯಾವ ಕಾರಣದಿಂದಲೋ ಕೋಟೆಯ ದ್ವಾರದ ಹೊರಬದಿಯಲ್ಲಿ ದೊಡ್ಡದಾಗಿ ಕಲಕಲರವ ವೇಳ ತೊಡಗಿತು.

ಪ್ರಜೆಗಳ ಕೂಗಾಟವೂ ಸೈನಿಕರ ಎಚ್ಚರಿಕೆಗಳೂ ಆ ಪ್ರಾಂತದಲ್ಲೆಲ್ಲ ಮಾರ್ಮೊಳಗ ತೊಡಗಿದುವು. ಇಷ್ಟೊಂದು ಗಲಾಟೆಗೆ ಕಾರಣವೇನಿರಬಹುದೆಂದುಕೊಂಡು, ಆಶ್ಚರ್ಯಪಡುತ್ತ ವಿಹಾರವನ್ನು ಬಿಟ್ಟು ಕೋಟೆಯ ಕಡೆಗೆ ಹಿಂದಿರುಗ ತೊಡಗಿದನು ಮಂದರದೇವರಾಜ. ಅವನು ಅಲ್ಲಿಗೆ ಸಮೀಪಿಸುತ್ತಿರಲು, ಮಂತ್ರಿ ಬೇಗಬೇಗನೆ ಆ ಕಲಕಲರವವೇಳಿಸುವ ಗುಂಪಿನ ಕಡೆಗೆ ಬಂದು ಶಾಂತರಾಗಿರುವಂತೆ ಜನರಿಗೆ ಎಚ್ಚರಿಕೆ ಹೇಳುವುದನ್ನು ಮಂದರದೇವನು ನೋಡಿದನು. ರಾಜನು ಅಲ್ಲಿಗೆ ಬರುತ್ತಿರುವ ಸಂಗತಿಯನ್ನು ಕೆಲವು ಸೈನಿಕರು ನೋಡಿ, ಆ ಸಂಗತಿಯನ್ನು ಮಂತ್ರಿಯೊಂದಿಗೆ ಹೇಳಿದರು. ಕೂಡಲೇ ಮಂತ್ರಿ ಹಿಂದಿರುಗಿ ನೋಡಿ ಬೇಗಬೇಗನೆ ರಾಜನ ಬಳಿಗೆ ಬಂದು ನಮಸ್ಕರಿಸಿ ತಲೆವಾಗಿ ನಿಂತನು.

“ಏನಾಯಿತು ? ಈ ಗಲಾಟೆಗೆ ಕಾರಣವೇನು ?” ಎಂದು ಮಂದರದೇವರಾಜನು ಮಂತ್ರಿಯನ್ನು ಕೇಳಿದನು.

ಮಂತ್ರಿ ಸ್ವಲ್ಪಹೊತ್ತು ಕೋಟೆಯ ಬಾಗಿಲ ಹತ್ತಿರವಿರುವ ಗುಂಪಿನ ಕಡೆಗೆ ತಿರುಗಿ, “ಪ್ರಭೂ ! ಇದರಲ್ಲಿ ಎಷ್ಟು ನಿಜವೋ ಎಷ್ಟುಸುಳ್ಳೋ ಸರಿಯಾಗಿ ತಿಳಿದಿಲ್ಲ. ನನ್ನ ಮೆಟ್ಟಿಗೆ ಹೇಳುವುದಾದರೆ ಇದರಲ್ಲಿ




ಸ್ವಲ್ಪ ನಿಜವಿರಬೇಕೆಂದೂ ಭಾವಿಸುತ್ತೇನೆ. ಕುಂಡಲಿನೀ ದ್ವೀಪವು ಈ ಮಧ್ಯೆ ಅರಾಜಕ ಪರಿಸ್ಥಿತಿಯಲ್ಲಿದೆಯೆಂದು ನಮಗೆಲ್ಲ ಗೊತ್ತಿದೆಯಷ್ಟೆ ? ಈಗ ಬಂದ ಸಮಾಚಾರವೇನಂದರೆ, ಆ ದ್ವೀಪರಾಜ್ಯವನ್ನು ನರವಾಹನಮಿಶ್ರನೆಂಬ ಸೇನಾಧಿಪತಿ ವಶಪಡಿಸಿಕೊಂಡು ಈಗ ನಮ್ಮ ರಾಜ್ಯದ ಮೇಲೆ ದಾಳಿ ಹೊರಟಿದ್ದಾನಂತೆ, ಇದು ಸಮುದ್ರದಲ್ಲಿ ಮೀನು ಹಿಡಿಯಲು ಹೋದ ಬೆಸ್ತಜನರಿಂದ ತಿಳಿದು ಬಂದ ವಾರ್ತೆ. ಅಂತಲೇ ಇದು ಪ್ರಜೆಗಳಿಗೆಲ್ಲಾ ತಿಳಿದು, ಯುದ್ಧಸನ್ನಾಹವೆಲ್ಲಿದೆ ? ಸುಮ್ಮನಿದ್ದರೆ ಹೇಗೆ ? ಅಂತ ಕಲವರವೆಬ್ಬಿಸುತ್ತಿದ್ದಾರೆ. ಶಾಂತವಾಗಿರುವಂತೆ ಅವರಿಗೆ ಹೇಳುತ್ತಾ ಇದ್ದೆ. ನಿಜಸಂಗತಿಯನ್ನು ಬೇಗನೇ ತಿಳಿದು ಅರಿಕೆ ಮಾಡುತ್ತೇನೆ " ಎಂದನು.

ಮಂದರದೇವರಾಜನು ತಲೆಯಾಡಿಸಿ ಸುಮ್ಮನಿದ್ದನು. ಮಂತ್ರಿ ಅಂದುಕೊಳ್ಳುವ ಹಾಗೆ ಇದರಲ್ಲಿ ಸ್ವಲ್ಪ ನಿಜವಿರಲೂ ಬಹುದೆಂದು ರಾಜನೂ ಭಾವಿಸುವಂತೆ ಆ ಮೌನಮುದ್ರೆ ಹೇಳುತ್ತಿತ್ತು. ಕುಂಡಲಿನೀ ದ್ವೀಪವು ಈ ನಡುವೆ ಅರಾಜಕಸ್ಥಿತಿಯಲ್ಲಿದ್ದುದರಿಂದ ಅಲ್ಲಿ ನರವಾಹನ ಮಿಶ್ರನ ದ್ರೋಹ ನಡೆದುದು ನಿಜವೇ. ಅಂಥವನಿಗೆ ರಾಜ್ಯಕಾಂಕ್ಷೆ ಚುಚ್ಚುವುದೂ ಸಹಜವೇ. ತಮ್ಮ ರಾಜನಿಗೆ ಧೈರ್ಯಕೊಡುವ ಉದ್ದೇಶದಿಂದ ಮಂತ್ರಿ, " ಯಾವುದಕ್ಕೂ ಮುಂಜಾಗ್ರತೆಯಿಂದಿರಬೇಕೆಂದು ಸೇನಾಧಿಪತಿಗೆ ಸುದ್ದಿ ಕಳಿಸಿದ್ದೇನೆ, ನರವಾಹನ ಮಿಶ್ರನು ಧೂರ್ತನೆಂಬುದೇನೋ ನಿಜವೇ. ಆದರೆ ಈ ವಾರ್ತೆಯಲ್ಲಿರುವ ನಿಜಸಂಗತಿ ಸೂರ್ಯಾಸ್ತದೊಳಗೆ ನಮ್ಮ ಗೂಢಚಾರರ ಮೂಲಕ ತಿಳಿದುಬಿಡುತ್ತದೆ. ಇನ್ನೇನು, ಅವರೂ ಬರುವಹೊತ್ತೇ. ಅಂತಹ ಗಾಬರಿಯಾಗಲು ಕಾರಣವೇನಿಲ್ಲ " ಎಂದನು.

ಮಂದರದೇವನು ಮಂತ್ರಿಯ ಕಡೆಗೆ ಪ್ರಶ್ನಾರ್ಥಕವಾಗಿ ನೋಡಿ, " ಸರಿ. ಆ ವಾರ್ತೆಯೊಳಗಿನ ನಿಜಾನಿಜಗಳು ತಿಳಿದಕೂಡಲೇ ನನಗೆ ತಿಳಿಸಿರಿ. ನಿಮ್ಮನ್ನು ಕಾದುಕೊಂಡಿರುತ್ತೇನೆ " ಎಂದು ಹೇಳಿ ತನ್ನ ಭವನದ ಕಡೆಗೆ ಹೋದನು. ಮಂತ್ರಿ ಗಾಬರಿಗೊಂಡಿರುವನೆಂದೂ, ತನ್ನ ಸಮಾಧಾನಕ್ಕಾಗಿ ಏನೋ ಹೇಳಿದನೆಂದೂ ರಾಜನಿಗೆ ಗೊತ್ತಾಯಿತು.

ರಾಜನು ಹೋದಕೂಡಲೇ ಮಂತ್ರಿ ಸೀದಾ ಹೋಗಿ ಕೋಟೆಯ ಬುರುಜಿನ ಮೇಲೇರಿ ನೋಡತೊಡಗಿದನು. ದೂರದಲ್ಲಿ ಸಮುದ್ರವೂ, ಸಮುದ್ರದಲ್ಲಿ ತೇಲಾಡುವ ನಾವೆಗಳೂ ಕಾಣುತ್ತಿದ್ದುವು. ಮಂತ್ರಿ ಅಂದುಕೊಂಡ ಹಾಗೆಯೇ ದೂರದಲ್ಲಿ ತೆರೆಚಾಪೆ ಎತ್ತಲ್ಪಟ್ಟ ಒಂದು ನಾವೆ ಕಾಣುತ್ತಿತ್ತು. ಅದು ನೆಟ್ಟಗೆ ಮರಾಳದ್ವೀಪವನ್ನೇ ಗುರಿಯಿಟ್ಟು ಬರುತ್ತ, ಕ್ಷಣಕ್ಷಣಕ್ಕೂ ಸ್ಪಷ್ಟವಾಗಿಕಾಣುತ್ತಿತ್ತು. ಅದರೊಳಗೆ ಸೈನಿಕರೇ ತುಂಬಿ ಕುಳಿತಿದ್ದರು.

ಮಂತ್ರಿ ಮಾಡಿದ ಆಜ್ಞೆಯಂತೆ ಸೇನಾಧಿಪತಿ ಮುಂಜಾಗ್ರತೆಗಾಗಿ ಸೇನೆಗಳನ್ನು ವಿಭಾಗಿಸುತ್ತ,

ಬೇಗಬೇಗನೆ ಆಜ್ಞೆಗಳನ್ನು ಮಾಡುತ್ತಿದ್ದನು. ಸುತ್ತಲೂ ಸಮುದ್ರದಿಂದ ಆವರಿಸಲ್ಪಟ್ಟ ಮರಾಳದ್ವೀಪಕ್ಕೆ ಆಗಾಗ ಅಕ್ಕಪಕ್ಕಗಳ ದ್ವೀಪರಾಜ್ಯಗಳಿಂದ ಕಿರುಕುಳಗಳು ಬರುತ್ತಲೇ ಇದ್ದುದರಿಂದ, ಮರಾಳದ್ವೀಪದ ಪ್ರತಿ ಪುರುಷನೂ ಅಷ್ಟೋ ಇಷ್ಟೋ ಸೈನಿಕಶಿಕ್ಷಣ ಹೊಂದಿರಬೇಕೆಂದು ರಾಜಶಾಸನವಿದ್ದಿತು. ಅಂತೆಯೇ ಜನರೂ ಎಚ್ಚರಿಕೆಯಲ್ಲಿದ್ದರು. ಆದುದರಿಂದ ಪ್ರಜೆಗಳು ಶತ್ರು ಭಯವಿಲ್ಲದೆ ನೆಮ್ಮದಿಯಾಗಿದ್ದರು.

ಸೇನಾಧಿಪತಿ ಕೆಲವು ಸೈನಿಕರೊಂದಿಗೆ ಸಮುದ್ರ ತೀರಕ್ಕೆ ಹೊರಟನು. ಮರಾಳದ್ವೀಪದ ನಾವಿಕದಳದವರು ಆಗತ್ಯಬಿದ್ದರೆ ಶತ್ರು ನಾವೆಗಳೊಂದಿಗೆ ಯುದ್ಧಕ್ಕೆ ತಲೆಹಾಕಲು ಸಿದ್ಧರಾಗುತ್ತಿದ್ದರು. ಶಂಖನಾದಗಳ ಮೂಲಕವೂ ಪ್ರತಿನಾವಿಕನೂ ಸಮುದ್ರ ತೀರದಲ್ಲಿರುವ ತಮ್ಮತಮ್ಮ ನಾವೆಗಳನ್ನು ತಯಾರಾಗಿ ಬರುವಂತೆ ಆಜ್ಞಾಪಿಸುತ್ತಿದ್ದನು.

ಕೋಟೆಯ ಬುರುಜಿನ ಮೇಲಿದ್ದು ಈ ಸನ್ನಾಹಗಳನ್ನೆಲ್ಲ ನೋಡುತ್ತಿದ್ದ ಮಂತ್ರಿ, ಸೇನಾಧಿಪತಿಗಳ ಜಾಗರೂಕತೆಗೂ, ಕರ್ತವ್ಯಪ್ರಜ್ಞೆಗೂ, ಶ್ರದ್ಧೆಗೂ ಮೆಚ್ಚಿಕೊಳ್ಳುತ್ತಿರಲು, ಅಷ್ಟರಲ್ಲೇ ಏನೋ ವಿಪರೀತವಾಗುವುದೆಂಬ ಸೂಚನೆಯಂತೆ, ತಮ್ಮ ಗೂಢಚಾರರ ನಾವೆಯ ಹಿಂದೆ ಸ್ವಲ್ಪ ದೂರದಲ್ಲಿ ಹಠಾತ್ತಾಗಿ ಕಗ್ಗಿನ ಮೇಘವು ಕವಿಯುವಂತೆ ಕಂಡಿತು. ಅದು ತುಫಾನಿನ ಸೂಚನೆಯೇನೋ ಎಂದು ಪರಿಶೀಲಿಸುತ್ತಿರಲು; ಅದು ಮೇಘವಲ್ಲವೆಂದೂ, ಕೆಲವು ಯುದ್ಧನಾವೆಗಳು ಗುಂಪಾಗಿ ಮರಾಳದ್ವೀಪಕ್ಕೆ ಬರುತ್ತಿವೆಯೆಂದೂ ಗೊತ್ತಾಯಿತು. ಅವುಗಳ ಹಿಂದೆ ದೂರಾಕಾಶದಲ್ಲಿ ಮುದ್ದೆಮುದ್ದೆಯಾಗಿ ಕಗ್ಗಿನ ಮೇಘಗಳೂ ಇದ್ದವು. ಆ ಯುದ್ಧ ನಾವೆಗಳಿಂದ ಕಪ್ಪಗಿನ ಹೊಗೆ ಹೊರಡುತ್ತಿದ್ದಿತು. ವೇಗವಾಗಿ ಬರುತ್ತಿವೆ ಆ ನಾವೆಗಳು! ಸ್ವಲ್ಪ ಹೊತ್ತಿನಲ್ಲಿ ಎಣ್ಣೆಯ ಬಟ್ಟೆಯನ್ನು ಸುತ್ತಿದ ಬಾಣಗಳಿಗೆ ಬೆಂಕಿ ತಾಗಿಸಿ, ಮರಾಳದ್ವೀಪದವರ ನಾವೆಗೆ ಪ್ರಯೋಗಿಸುವುದೂ ಮಂತ್ರಿಗೆ ಕಂಡಿತು. ಹಿಂದು ಮುಂದು ಸೂಚನೆಯಿಲ್ಲದೆ ಯುದ್ಧವೇ ಶುರುವಾಗಿಬಿಟ್ಟಿತ್ತು!





ಇದೇನಾಶ್ಚರ್ಯ! ಎಂತಹ ಅನ್ಯಾಯ! ಬೆಸ್ತರಿಂದ ಬಂದ ವಾರ್ತೆ ನಿಜವೆಂದು ಈಗ ಮಂತ್ರಿಗೆ ಸ್ಪಷ್ಟವಾಯಿತು. ಯುದ್ಧದ ಸೂಚನೆ ಕೊಡದೆ, ಪ್ರಕಟನೆ ಮಾಡದೆ ಪರದೇಶಗಳ ಮೇಲೆ ದಾಳಿಮಾಡುವ ಹೊಸ ಸಂಪ್ರದಾಯವಿದು! ಕುಂಡಲಿನೀ ರಾಜ್ಯಾಧಿಕಾರವನ್ನು ಹಸ್ತಗತ ಮಾಡಿಕೊಂಡ ದುಷ್ಟನಾದ ನರವಾಹನ ಮಿಶ್ರನು ಈ ತಲೆತಿರುಕ ಸಂಪ್ರದಾಯವನ್ನು ಅಮಲಿಗೆ ತಂದಿದ್ದಾನೆ. ಮಂತ್ರಿಗೆ ಬಂದ ಕೋಪದಲ್ಲಿ ಮೈಯೆಲ್ಲಾ ಉರಿಯಿತು. ಸುಮಾರು ನೂರು ವರ್ಷಗಳ ಹಿಂದೆ ಶಾಕ್ತೇಯನೆಂಬ ಮಾಂತ್ರಿಕನು, ಹೀಗೆಯೇ ತನ್ನಿಚ್ಛೆಯಂತೆ ಯುದ್ಧ ಪ್ರಕಟನೆ ಏನೂ ಇಲ್ಲದೆಯೇ ಅನೇಕ ದ್ವೀಪರಾಜ್ಯಗಳನ್ನು ಕೊಳ್ಳೆ ಹೊಡೆದಿದ್ದನು. ಅವನು ರಾಜವಂಶದವನಲ್ಲವಾದುದರಿಂದ, ಮಾಂತ್ರಿಕನಾದುದರಿಂದ, ಮೃಗಕ್ಕೆ ಸಮಾನನೆಂದು ಅವನ ಅಧರ್ಮವನ್ನು ಪ್ರಜೆಗಳು ಸರಿಹೊಂದಿಸಿಕೊಂಡಿದ್ದರು. ಆದರೆ ನರವಾಹನ ಮಿಶ್ರನು ಒಬ್ಬ ರಾಜನ ಹತ್ತಿರ ಸೇನಾಧಿಪತಿಯಾಗಿ ದ್ರೋಹದಿಂದ ರಾಜ್ಯವನ್ನು ಅಪಹರಿಸಿದ್ದು ಮಾತ್ರವಲ್ಲದೆ. ಸುತ್ತುಮುತ್ತಿನ ರಾಜ್ಯಗಳಿಗೂ ಶನಿ ಹಿಡಿಸಂತ್ತಾನೆಂದರೆ ಇದಕ್ಕಿಂತ ದುಷ್ಟತನ ಬೇರೇನಿದೆ?

ಮಂತ್ರಿ ಇಂತಹ ಆಲೋಚನೆಯಲ್ಲಿರುವಾಗ, ಮರಾಳದ್ವೀಪದ ನಾವಿಕಾ ಸೈನ್ಯವು, ತಮ್ಮ ನಾವೆಯ ಮೇಲೆಬರುವ ಅಪಾಯವನ್ನು ಗಮನಿಸಿ, ಮುಂದಕ್ಕೆ ಧಾವಿಸಿತು. ಸೈನಿಕರು ಉತ್ಸಾಹದಿಂದ ಸಿಂಹನಾದ ಮಾಡುತ್ತ ಶತ್ರುಗಳು ಮುಂದೆ ಬಾರದಂತೆ ಅಟಕಾಯಿಸತೊಡಗಿದರು. ಪ್ರಶಾಂತವಾಗಿದ್ದ ತಮ್ಮ ಸೇನೆಗಳೂ ಸೇನಾನಾಯಕರೂ ಒಮ್ಮೆಗೇ ಅಷ್ಟರ ಮಟ್ಟಿಗೆ ಸಿದ್ಧರಾದ ಜಾಣತನವನ್ನು ಮಂತ್ರಿ ಮೆಚ್ಚಿಕೊಂಡನು. ಅಂತೂ ಮರಾಳದ್ವೀಪದ ಹತ್ತಿರವೇ ಸಮುದ್ರದಲ್ಲಿ ಕುಂಡಲಿನೀ, ಮರಾಳದ್ವೀಪಗಳೊಳಗೆ ನಾವಿಕಾ ದಳಗಳ ಯುದ್ಧವು ಪ್ರಾರಂಭವಾಯಿತು.

ಹಲವಾರು ಸೈನಿಕರು ಕೋಟೆಯ ಬುರುಜುಗಳ ಮೇಲೆ ಬೇಗಬೇಗನೆ ಏರಿ ಬರತೊಡಗಿದರು. ಒಂದು ವೇಳೆ ಮರಾಳದ್ವೀಪದ ಪ್ರಜೆಗಳು ಸೋತು ಹೋಗಿಬಿಟ್ಟರೆ, ಪಟ್ಟಣವನ್ನು ರಕ್ಷಿಸಲು, ಆ ಸೈನಿಕರು ಕಳುಹಿಸಲ್ಪಟ್ಟಿದ್ದರು, ಮಂತ್ರಿ ಆ ಸೈನಿಕರಲ್ಲಿ ಒಬ್ಬನನ್ನು ಕರೆದು, ಯುದ್ಧವಾರ್ತೆಯನ್ನು ರಾಜನೊಂದಿಗೆ ಹೀಗೆ ಹೀಗೆ ಹೇಳುವಂತೆ ಹೇಳಿ ಕಳುಹಿಸಿದನು. ಅದನ್ನು ಶಿರಸಾವಹಿಸಿಕೊಂಡು ಅವನು ಅವಸರದಿಂದ ಓಡಿದನು.

ನೋಡನೋಡುತ್ತಿದ್ದಂತೆ ಸಮುದ್ರದಲ್ಲಿ ನಾವಿಕಾ ಯುದ್ಧವು ಬಲು ಜೋರಾಗಿ ನಡೆಯುತ್ತಿದ್ದಿತು. ಎರಡು ಪಕ್ಷಗಳವರೂ ಪ್ರಾಣವನ್ನು ಪಣಕ್ಕಿಟ್ಟು ಹೋರಾಡತೊಡಗಿದರು. ಎಣ್ಣೆಯ ಬಟ್ಟೆಯಿಂದ ಉರಿಯುವ ಬಾಣಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ಎಡೆಬಿಡದೆ ಹಾರಾಡುತ್ತ,



ವಾಗಿ ತೀರಕ್ಕೆ ಬರಬೇಕೆಂಬುದೇ. ಆಗ ಕುಂಡಲಿನೀ ರಾಜ್ಯದಲ್ಲಿ ನಡೆದ ಬದಲಾವಣೆಗಳೂ, ನರವಾಹನ ಮಿಶ್ರನ ಶಕ್ತಿಸಂಗತಿಗಳೂ, ಅಲ್ಲಿಯ ಪ್ರಜೆಗಳ ಮನಸ್ಥಿತಿಯೂ ಅರ್ಥವಾಗುತ್ತದೆ. ಆ ನಾವೆ ಸುರಕ್ಷಿತವಾಗಿ ಬರುತ್ತದೋ ಇಲ್ಲವೋ ಎಂಬುದೇ ಈಗ ಸಂದೇಹ !

ಅಷ್ಟರಲ್ಲಿ ಮಂತ್ರಿಯು ಹಿಂದಿನಿಂದ ಪಾದಗಳ ಸಪ್ಪಳ ಕೇಳಿಸಿತು. ಅವನು ತಲೆ ತಿರುಗಿಸಿ ನೋಡಿದಾಗ, ರಾಜನಿಗೆ ಯುದ್ಧದ ಸಮಾಚಾರ ಹೇಳಲು ಹೋದ ಸೈನಿಕನು ತೇಕುತ್ತ ಓಡೋಡಿ ಬಂದು ಗಾಬರಿಯ ಕಳೆಯಲ್ಲಿ ನಿಂತನು.

"ಏನಾಯಿತು ? ಏಕೆ ಹೀಗೆ ಓಡುತ್ತಾ ಬಂದೆ?" ಎಂದು ಮಂತ್ರಿ ಆತುರದಿಂದ ಕೇಳಿದನು.

"ಮಹಾರಾಜರು ಎಲ್ಲಿಯೂ ಕಾಣುವುದಿಲ್ಲ ಪ್ರಭೂ !" ಎಂದು ಸೈನಿಕನು ಉಬ್ಬಸಬಿಡುತ್ತ ಹೇಳಿದನು.

"ಆ ಸಂಗತಿ ನಿನಗೆ ಹೇಗೆ ಗೊತ್ತಾಯಿತು ? ಸ್ವಲ್ಪ ಮೊದಲು ಅವರು ಭವನದ ಕಡೆಗೆ ಹೋದರಲ್ಲ ?" ಎಂದನು ಮಂತ್ರಿ.

"ಅಯ್ಯಾ, ನಾನು ಹೋಗುವಾಗಲೇ ರಾಜರ ಭವನದೊಳಗೆ ಅಲ್ಲಕಲ್ಲೋಲವಾಗುತ್ತಿದ್ದಿತು. ಕೆಲವು ನಿಮಿಷಗಳ ಕೆಳಗೆ ಮಹಾರಾಜರು, ದ್ರೋಹ ದ್ರೋಹ, ಸಹಾಯ, ಸಹಾಯ ಎಂದು ಕೂಗುವು ದನ್ನು ಒಬ್ಬಿಬ್ಬರು ದಾಸಿಯರು ಕೇಳಿದರಂತೆ. ಭಟರು ಅವರನ್ನು ಅರಮನೆಯೊಳಗೆಲ್ಲಾ ಹುಡುಕು ತ್ತಿದ್ದಾರೆ. ಎಲ್ಲಿಯೂ ಮಹಾರಾಜರ ಸದ್ದು ಕೇಳಲಿಲ್ಲ. ಅವರೊಂದಿಗೆ ಅವರ ಇಬ್ಬರು ಅಂಗರಕ್ಷಕರು ಕೂಡಾ ಕಾಣುವುದಿಲ್ಲ. ಏನೋ ಆಗಬಾರದುದೇ ಆಗಿರಬೇಕು ಪ್ರಭೂ !" ಎಂದನು ಸೈನಿಕ.

ಅಂಗರಕ್ಷಕರೂ ಕಾಣುವುದಿಲ್ಲವೆಂದು ಕೇಳಿದ ಕೂಡಲೇ ಮಂತ್ರಿಗೆ ನಡೆದ ದ್ರೋಹವು ಏನೆಂಬು

ಆಕಾಶದಲ್ಲಿ ಅಗ್ನಿ ನಾಟ್ಯವಾಗಿ ತೋರಿತು. ನಾವೆಗಳೂ ಉರಿಯ ತೊಡಗಿ, ನಾವಿಕರೂ ಸಮುದ್ರದಲ್ಲಿ ಹಾರುತ್ತಿದ್ದರು. ಉರಿಯುವ ನಾವೆಗಳ ಬೆಂಕಿಯನ್ನು ಆರಿಸಿ ಅವುಗಳನ್ನು ವಶಪಡಿಸಿಕೊಳ್ಳಲು ಎರಡು ಪಕ್ಷಗಳವರೂ ಪ್ರಯತ್ನಿಸುತ್ತಿದ್ದರು. ಆ ನಾವೆಗಳಿಗೆ ಧುಮುಕುವುದೂ ಹತ್ತುವುದೂ ಬೀಳುವುದೂ ನಡೆದೇ ಇದ್ದಿತು. ಸಮುದ್ರಕ್ಕೆ ಬಿದ್ದವರೆಷ್ಟೋ ! ಕತ್ತಿಗಳಿಗೆ ಬಲಿಯಾದವರೆಷ್ಟೋ ! ಆ ಸಮಯದಲ್ಲಿ ಮೇಘಗಳು ಮೇಲೆ ಮೇಲೆ ಬರುತ್ತ, ಮಿಂಚುಗಳೂ ಗುಡುಗೂ ತೊಡಗಿದುವು.

ಕೋಟೆಯ ಬುರುಜಿನ ಮೇಲಿನಿಂದ ಇದನ್ನೆಲ್ಲಾ ನೋಡುತ್ತಿದ್ದ ಮಂತ್ರಿಗೆ ಈಗ ನಡೆಯುವ ನಾವಿಕಾ ಯುದ್ಧದ ಪರ್ಯವಸಾನವು ತಮ್ಮ ರಾಜ್ಯಕ್ಕೆ ಅನುಕೂಲವಾಗುವುದೆಂಬ ನಂಬುಗೆ ಸಣ್ಣದಾಗುತ್ತಾ ಹೋಯಿತು. ಆವನಿಗಿದ್ದ ಒಂದೇ ಒಂದು ಆಶೆ, ತಾನು ಕಳುಹಿಸಿದ ಗೂಢಚಾರರ ನಾವೆ ಸುರಕ್ಷಿತ



ದನ್ನು ಊಹಿಸಿಕೊಳ್ಳುವಂತಾಯಿತು. ಬಹುಶಃ ಇದು ಕುಂಡಲಿನೀ ದ್ವೀಪವನ್ನು ವಶಪಡಿಸಿಕೊಂಡ ನರವಾಹನ ಮಿಶ್ರನ ಹೊಸ ರಾಜನೀತಿಯ ಪ್ರಭಾವವೆಂದು ಹೊಳೆಯಿತು. ರಾಜನು ಭವನ ದೊಳಗೆಲ್ಲಿಯೂ ಇಲ್ಲವೆಂದು ಭಟರೆಲ್ಲಾ ಹುಡುಕಿ ಹೇಳುವುದನ್ನು ನೋಡಿದರೆ, ಅವರನ್ನು ಬಂಧಿಸಿ ಒಯ್ಯುವರು ಇಷ್ಟು ಹೊತ್ತಿಗೆ ಕೋಟೆ ಗೋಡೆ ಯಾಚೆಗೆ ತೆಗೆದುಕೊಂಡು ಹೋಗಿರಬಹುದೆಂದು ಮಂತ್ರಿಗೆ ಅನುಮಾನವೆದ್ದಿತು. ತಮ್ಮ ರಾಜನ ಅಂಗರಕ್ಷಕರು ಮಹಾದ್ರೋಹಿಗಳೇ ನಿಜ !

ಇಂತಹ ಅನುಮಾನವೆದ್ದುದೇ ತಡ, ಮಂತ್ರಿ ಅವಸರವಸರವಾಗಿ ಕೆಲ ಮಂದಿ ಸೈನಿಕರನ್ನು ಕರೆದು ಕೊಂಡು ಕೋಟೆಯ ಮೇಲಿನ ಬುರುಜಿನಿಂದ ಇನ್ನೊಂದು ಬುರುಜಿನ ಕಡೆಗೂ, ಅಲ್ಲಿಂದ ಮತ್ತೊಂದು ಬುರುಜಿಗೂ ಓಡುತ್ತ ಹೊರಗೆ ಕಾಣುವ ಅಗಳತೆಯನ್ನು ನೋಡುತ್ತ ಹೋಗಲು, ಒಂದು ಕಡೆ ಕೋಟೆಯ ಗೋಡೆಯಿಂದ ನೇತಾಡು ತ್ತಿರುವ ಹಗ್ಗವೂ, ಅದನ್ನು ಹಿಡಿದುಕೊಂಡು ಕೆಳಕ್ಕೆ ಇಳಿಯುತ್ತಿದ್ದ ಮೂವರು ಮನುಷ್ಯರೂ ಅವನ ಕಣ್ಣಿಗೆ ಬಿದ್ದರು.

ಮಂತ್ರಿ ಅವರನ್ನು ಸೈನಿಕರಿಗೆ ತೋರಿಸುತ್ತ, “ಅದಿಗೋ ಮಹಾರಾಜರು ! ಅವರ ಅಂಗರಕ್ಷಕ ರಿಬ್ಬರು !” ಎನ್ನಲು ಸೈನಿಕರು “ಹೌದು ಹೌದು ! ಅವರೇ ! ಅವರೇ ! ಮಹಾದ್ರೋಹ ! ಮಹಾ ದ್ರೋಹ !” ಎಂದು ಕೂಗಿದರು.

ಈಗೇನು ಮಾಡುವುದೆಂದು ಮಂತ್ರಿ ಇಕ್ಕಟ್ಟಿಗೆ ಬಿದ್ದನು. ಕೋಟೆ ಗೋಡೆಯ ಆಣಿಗೆ ಕಟ್ಟಲ್ಪಟ್ಟ ಹಗ್ಗವನ್ನು ಕಡಿದರೆ, ರಾಜನೂ ಅವನನ್ನು ನಿರ್ಬಂಧಿಸಿ ಕೊಂಡು ಹೋಗುವ ಅಂಗರಕ್ಷಕರೂ ಅಗಾಧವಾದ ಅಗಳತೆಯೊಳಗೆ ಬಿದ್ದು ಹೋಗುವರು. ಹಾಗಿಲ್ಲದೆ ನೋಡುತ್ತಾ ಸುಮ್ಮನಿದ್ದರೆ ಅವರು ರಾಜನನ್ನು ಬಲವಂತದಿಂದ ಬಂಧಿಸಿ, ನಿರಾತಂಕವಾಗಿ ಶತ್ರು ರಾಜ್ಯಕ್ಕೆ ಕರೆದುಕೊಂಡು ಹೋಗುತ್ತಾರೆ. ಸಮೀಪ ದಲ್ಲಿ ಶತ್ರುಗಳ ಕಡೆಯವರು ಅಡಗಿ ನಿರೀಕ್ಷಿಸು ತ್ತಿರಲೂ ಸಾಕು.

ಮಂತ್ರಿ ಇಂತಹ ಸಂಶಯಗಳಲ್ಲಿ ಮುಳುಗೇಳು ತ್ತಿರುವಾಗ, ಒಬ್ಬ ಸೈನಿಕನು. “ಅಯ್ಯಾ. ಅಲ್ಲಿ ನೋಡಿರಿ ! ಅಗಳತೆಯ ಆಚೆಯ ಬದಿಯಲ್ಲಿ ಮೂರು ಕುದುರೆಗಳು ಸಿದ್ಧವಾಗಿ ನಿಂತಿವೆ.” ಎಂದು ಕೂಗಿ ಹೇಳಿದನು.

ಮಂತ್ರಿಯೂ ಆ ಕುದುರೆಗಳನ್ನು ನೋಡಿದನು. ಜೀನು ಹಾಕಿ ಸಿದ್ಧವಾಗಿ ನಿಂತಿದ್ದ ಕುದುರೆಗಳು. ಸಮಯ ನೋಡಿ ರಾಜನನ್ನು ಬಂಧಿಸಿ ತರಲು ನರ ವಾಹನ ಮಿಶ್ರನು ರಾಜಭವನದೊಳಗೆ ತನ್ನ ಬಂಟ ರನ್ನು ಪ್ರವೇಶಗೊಳಿಸಿದ್ದಾನೆ. ಇದನ್ನು ಅರ್ಥಮಾಡಿ ಕೊಂಡು ಮಂತ್ರಿ ಸಮುದ್ರದ ಕಡೆಗೆ ದೃಷ್ಟಿ ಹಾಯಿಸಿ ದನು, ತಮ್ಮ ಗೂಢಚಾರರ ನಾವೆ ತೀರವನ್ನು

ಸಮೀಪಿಸುತ್ತಾ ಇದೆ. ಪರಿಸ್ಥಿತಿ ವಿಷಮವಾದುದನ್ನು ನೋಡಿದ ಮಂತ್ರಿ ಸೈನಿಕರ ಕಡೆಗೆ ತಿರುಗಿ, "ನಿಮ್ಮಲ್ಲಿ ನಾಲ್ಕೈದು ಮಂದಿ ಕುದುರೆಗಳನ್ನೇರಿ ಮಹಾರಾಜರ ರಕ್ಷಣೆಗೆ ಧಾವಿಸಿರಿ. ಈ ದುರ್ಘಟನೆ ಕುರಿತು ಕೋಟೆಯ ಹೊರಗೆ ಕೂಡಿದ ಜನರಾರಿಗೂ ಏನೂ ಹೇಳಬೇಡಿ. ಬೇಗ ಓಡಿರಿ !" ಎಂದು ಆಜ್ಞೆ ಮಾಡಿದನು.

ಸೈನಿಕರು ಕೋಟೆಯ ಬುರುಜಿನ ಮೇಲಿನಿಂದ ಕೆಳಕ್ಕೆ ಓಡಿದರು. ಮಂತ್ರಿ ಕೆಳಗಿರುವ ಅಗಳತೆಯ ಕಡೆಗೆ ನೋಡಿದನು. ಅಷ್ಟು ಹೊತ್ತಿಗೆ ರಾಜನನ್ನು ದ್ರೋಹಿಗಳಾದ ಅಂಗರಕ್ಷಕರಿಬ್ಬರೂ ಅಗಳತೆಯನ್ನು ದಾಟಿಸಿ, ಕುದುರೆಗಳಿರುವ ಕಡೆಗೆ ನಡೆಯಿಸಿಕೊಂಡು ಹೋಗುತ್ತಿದ್ದರು. ರಾಜನು ಮುಂದೆ ನಡೆಯುತ್ತಿರಲು, ದ್ರೋಹಿಗಳಿಬ್ಬರೂ ಕತ್ತಿಗಳನ್ನು ಹಿಡಿದುಕೊಂಡು ಅವನ ಹಿಂದೆ ಹೋಗುತ್ತಿದ್ದರು. ಸ್ವಲ್ಪ ಹೊತ್ತಿಗೆ ಅವರು ರಾಜನನ್ನು ಒಂದು ಕುದುರೆಯ ಮೇಲೆ ಬಲವಂತವಾಗಿ ಏರಿಸಿದರು. ಅದು ಮುಂದೆ ಕದಲಿದ ಕೂಡಲೇ ಅದರ ಹಿಂದೆಯೇ ತಾವು ಕೂಡಾ ಕುದುರೆಗಳನ್ನು ಏರಿಕೊಂಡು ಓಡಿಸಿಕೊಂಡು ಹೋಗ ತೊಡಗಿದರು. ಹಾಗೆ ಅವರು ರಾಜನನ್ನು ಸಮುದ್ರದತೀರಕ್ಕೆ ಸಾಗಿಸಿಕೊಂಡು ಹೋಗುತ್ತಿದ್ದಾರೆಂದು ಮಂತ್ರಿಗೆ ಗೊತ್ತಾಯಿತು. ಇತ್ತ ರಾಜನ ರಕ್ಷಣೆಗಾಗಿ ಹೊರಟ ನಾಲ್ವರು ಸೈನಿಕರು, ಕುದುರೆಗಳನ್ನೇರಿ, ಬಹು ವೇಗದಿಂದ ಕೋಟೆಯ ದ್ವಾರದ ಮೂಲಕ ಜನರ ಗುಂಪನ್ನು ಸೀಳಿಕೊಂಡು ಹೊರಬಿದ್ದು, ರಾಜನನ್ನು ಬಂಧಿಸಿ ಒಯ್ಯುವವರ ಬೆಂಬತ್ತಿ ಓಡಿದರು. ಗೊರಸುಗಳ ಸಪ್ಪಳ ಕೇಳಿ ಹಿಂದಿರುಗಿ ನೋಡಿದ ದ್ರೋಹಿಗಳಿಬ್ಬರೂ, ತಮ್ಮನ್ನು ರಾಜನ ಸೈನಿಕರು ಬೆಂಬತ್ತುವುದನ್ನು ನೋಡಿ, ರಾಜನ ಬೆನ್ನಿಗೆ ತಮ್ಮ ಕತ್ತಿಗಳನ್ನು ತಾಗಿಸಿ, ವೇಗವಾಗಿ ಕುದುರೆಯನ್ನು ಓಡಿಸುವಂತೆ ಜೋರು ಮಾಡಿದರು.

ಕೋಟೆಯ ಬುರುಜಿನಮೇಲಿದ್ದು, ಇದನ್ನೆಲ್ಲಾ ಗಮನಿಸಿಕೊಂಡಿದ್ದ ಮಂತ್ರಿ, ಒಂದು ಸಾರಿ ಬಂಧಿತನಾದ ತಮ್ಮ ರಾಜನ ಕಡೆಗೂ, ಮತ್ತೊಂದು ಸಾರಿ ತೀರವನ್ನು ಸಮೀಪಿಸುತ್ತಿರುವ ಶತ್ರು ನಾವೆಗಳ ಕಡೆಗೂ ನೋಡುತ್ತ, "ದೇವೀ ! ಮರಾಳ ದ್ವೀಪೇಶ್ವರೀ ! ನಿನ್ನ ಭಕ್ತರನ್ನು ಹೀಗೂ ಕಠಿಣ ಪರೀಕ್ಷೆಗೆ ಗುರಿ ಪಡಿಸುವೆಯಾ ? ದಯೆದೋರಲಾರೆಯಾ ?" ಎಂದು ಎದೆಯ ಮೇಲೆ ಕೈಗಳನ್ನಿಟ್ಟು ಕೊಂಡು ಆಕಾಶದ ಕಡೆಗೆ ತಲೆ ಯೆತ್ತಿದನು.

ಮರುಕ್ಷಣದಲ್ಲೇ ಪ್ರಳಯ ಭಯಂಕರವಾದೊಂದು ಲಟಲಟಾಲ್ಲೆಂಬ ಸಿಡಿಲು ಶಬ್ದಮಾಲೆ ಪ್ರಾರಂಭವಾಯಿತು. ಮರಾಳದ್ವೀಪವೇ ಗಡಗಡಿಸಿತು. ಮಂತ್ರಿ ಬೆರಗಿನಿಂದ ನಿಶ್ಚೇಷ್ಟನಂತಾದನು. (ಇನ್ನೂ ಇದೆ)





# ನಟನಪ್ರಭಾವ

ಬೇತಾಳವೆಂಬ ಪ್ರವಾಹಕ್ಕೆ ಕಟ್ಟೆ ಕಟ್ಟಿಯೇ ತೀರುವೆನೆಂಬ ಪಣತೊಟ್ಟ ರಾಜಾ ತ್ರಿವಿಕ್ರಮನು, ಮರದ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಕ್ಕಿಳಿಸಿ, ತನ್ನ ಹೆಗಲಿನ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಹುದುಗಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜಾ, ಕೆಲವು ಜನರು ತಾವು ಆರಿಸಿಕೊಂಡ ಜೀವನ ಮಾರ್ಗವನ್ನು ಹಿಡಿದು, ದೊಡ್ಡ ಸಂಪತ್ತನ್ನೂ, ಹೆಸರು ಪ್ರತಿಷ್ಠೆಗಳನ್ನೂ ಗಳಿಸಿ ಕೂಡಾ, ಹಠಾತ್ತಾಗಿ ಅವುಗಳನ್ನೆಲ್ಲಾ ತ್ಯಜಿಸಿ, ಅಜ್ಞಾತವಾಸಕ್ಕೆ ಹೋಗಿ ಬಿಡುತ್ತಾರೆ. ನಿನ್ನ ಸಂಗತಿ ಹಾಗಾಗಲಾರದೆಂದು ಹೇಗೆ ಹೇಳುವುದು ? ಯಾವುದಕ್ಕೂ ಉದಾಹರಣೆ ಗಾಗಿ ಆ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ನಡೆಯುವಾಗ ದಾರಿಯ ಕಷ್ಟ ತಿಳಿಯದು" ಎಂದು ಕಥೆಯನ್ನು ಪ್ರಾರಂಭಮಾಡಿತು :

ಹಿಂದೆ ಪುಷ್ಪಕವೆಂಬ ದೇಶವನ್ನು ಪುಷ್ಪನಂದನೆಂಬ ರಾಜನು ಪಾಲಿಸುತ್ತಿದ್ದನು. ಅವನ ಪರಿಪಾಲನೆ ಪ್ರಜೆಗಳಿಗೆ ಕಂಟಕಪ್ರಾಯವಾಗಿತ್ತು. ಆಗ ಗಜೇಂದ್ರ

ಬೇತಾಳಕಥೆಗಳು




ನೆಂಬೊಬ್ಬ ಸಾಹಸೀ ಯುವಕನು ಪ್ರಜೆಗಳಲ್ಲಿ ದೊಡ್ಡದೊಂದು ಐಕಮತ್ಯವನ್ನುಂಟುಮಾಡಿ, ಕಡೆಗೆ ಪುಷ್ಪನಂದನನ್ನು ರಾಜ್ಯಭ್ರಷ್ಟ ಗೊಳಿಸಿಬಿಟ್ಟನು. ಆಮೇಲೆ ಪುಷ್ಪನಂದನ ಸಂಗತಿ ಯಾರಿಗೂ ತಿಳಿಯದು. ಪುಷ್ಪಕ ದೇಶವನ್ನು ಗಜೇಂದ್ರುನ ಪೀಳಿಗೆಯವರೇ ಆಳಿಕೊಂಡು ಬರುತ್ತಿದ್ದರು. ಗಜೇಂದ್ರುನನ್ನು ಕುರಿತು ಅನೇಕಮಂದಿ ಕವಿಗಳು ಕಥೆಗಳನ್ನೂ ಕಾವ್ಯಗಳನ್ನೂ ಬರೆಯುತ್ತಿದ್ದರು. ಅಂತಹ ಸಾಹಿತ್ಯವು ಜನಪ್ರಿಯವಾಗುತ್ತಿದ್ದಿತು.

ಪುಷ್ಪಕದೇಶದಲ್ಲಿ ಕೃಷ್ಣಕಾಂತನೆಂಬ ದೊಡ್ಡ ನಟನಿದ್ದನು. ಅವನನ್ನು ಗತ ಗಜೇಂದ್ರುನ ಅದ್ಭುತ ಚರಿತ್ರೆ ತುಂಬಾ ಆಕರ್ಷಿಸಿತ್ತು. ಅದನ್ನು ಕುರಿತು ಸ್ವತಃ ಒಂದು ನಾಟಕವನ್ನು ಬರೆದು, ಕೆಲವುಮಂದಿ ಯುವಕರಿಗೆ ನಟಿಸಲು ಶಿಕ್ಷಣವಿತ್ತು, ಊರೂರು ತಿರುಗುತ್ತ ನಾಟಕ ಪ್ರದರ್ಶನಗಳನ್ನು ನಡೆಸ ತೊಡಗಿದನು. ಗಜೇಂದ್ರುನ ಪಾತ್ರವನ್ನು ಅವನೇ ಧರಿಸುತ್ತಿದ್ದನು. ಅವನ ಈ ನಾಟಕಕ್ಕೆ ಜನರು ಗುಂಪುಗುಂಪಾಗಿ ಬಂದು ನೋಡುತ್ತಿದ್ದರು. ಕೃಷ್ಣ ಕಾಂತನ ನಟನೆಯ ಪ್ರಭಾವದಿಂದಾಗಿ ಹಿಂದಿನ ಕಾಲದ ಗಜೇಂದ್ರುನ ಕಾರ್ಯಪ್ರತಾಪಗಳನ್ನೂ, ದೇಶಭಕ್ತಿಯನ್ನೂ, ತ್ಯಾಗಶೀಲತೆಯನ್ನೂ ಜನರು ಕಣ್ಣಿಗೆ ಕಟ್ಟಿದಂತೆ ಕಾಣತೊಡಗಿದರು.

ಆಗ ಪುಷ್ಪಕದೇಶವನ್ನು ಆಳಿಕೊಂಡಿದ್ದ ನರೇಂದ್ರು ಮಹಾರಾಜನಿಗೆ ಕೃಷ್ಣಕಾಂತನನ್ನು ಕುರಿತು ಗೊತ್ತಾಯಿತು. ಅವನನ್ನು ಗೌರವಿಸುವುದು ರಾಜಧರ್ಮವೆಂದುಕೊಂಡು ನರೇಂದ್ರುರಾಜನು ಅವನನ್ನು ಕರೆಯಿಸಿ, ನಾಟಕಪ್ರದರ್ಶನವನ್ನು ನೋಡಿ ಅತ್ಯಾನಂದಗೊಂಡನು. ನಟಪ್ರವರನಾದ ಕೃಷ್ಣ ಕಾಂತನಿಗೆ ಅಮೋಘವಾದ ಕಾಣಿಕೆಕೊಟ್ಟು ಸನ್ಮಾನಿಸಿದನು, ಅಷ್ಟುಮಾತ್ರವಲ್ಲದೆ ಅವನನ್ನು ಆಸ್ಥಾನದ ಮುಖ್ಯನಟನೆಂದೂ ನಿಯಮಿಸಿ ಗೌರವಿಸಿದನು. ಇದರಿಂದಾಗಿ ಕೃಷ್ಣಕಾಂತನು ರಾಜಾಸ್ಥಾನದಲ್ಲಿರ ಬೇಕಾಗಿಬಂದರೂ, ವರುಷದಲ್ಲಿ ಆರು ತಿಂಗಳವರೆಗೆ ದೇಶಾಟನೆ ಮಾಡುತ್ತ ನಾಟಕ ಪ್ರದರ್ಶನಗಳನ್ನು ನೀಡಲು ಅನುಮತಿ ಪಡೆದಿದ್ದನು.

ಹಾಗೆ ಕೃಷ್ಣಕಾಂತನು ಒಂದು ಗ್ರಾಮದಲ್ಲಿ ನಾಟಕ ಪ್ರದರ್ಶನ ನೀಡಿ ಜನರನ್ನು ಸಂತೋಷಪಡಿಸಿದನು. ಅಲ್ಲಿಯ ನಾಟಕಪ್ರದರ್ಶನ ಮುಗಿದ ಮೇಲೆ ಒಬ್ಬಳು ಯುವತಿ ಅವನನ್ನು ನೋಡಲು ಬಂದಳು. ಅವಳ ಹಿಂದೆ ಇನ್ನೊಬ್ಬಳು ಯುವತಿಯೂ ಇದ್ದಳು. ಮೊದಲನೇಯುವಳು ಎರಡನೆಯವಳನ್ನು ಕೃಷ್ಣ ಕಾಂತನಿಗೆ ತೋರಿಸುತ್ತ, "ನಿಮ್ಮ ನಟನೆ ಅತ್ಯದ್ಭುತ! ಇವಳು ನನ್ನ ತಂಗಿ. ಹೆಸರು ಮಾಲತಿ. ಇವಳು ನಿಮ್ಮನ್ನೇ ಮದುವೆಯಾಗಬೇಕೆಂದು ಹೇಳುತ್ತಾಳೆ. ನಾಳೆ ನೀವು ಒಬ್ಬರೇ ನಮ್ಮ ಊರಿಗೆ ಬಂದು ನಮ್ಮ ತಂದೆತಾಯಿಗಳೊಂದಿಗೆ ಮಾತಾಡಬೇಕೆಂದು ಕೇಳಿಕೊಳ್ಳುತ್ತೇವೆ" ಎಂದಳು.

ಅವಳು ತನ್ನ ಊರು, ಹೆಸರು ತಂದೆತಾಯಿಗಳ ಹೆಸರು ಮುಂತಾದ ವಿವರಗಳನ್ನು ಹೇಳಿ, ಮಾಲತಿ ಯೊಂದಿಗೆ ಹೊರಟುಹೋದಳು.

ಮಾಲತಿ ತುಂಬಾ ಸುಂದರಿಯಾಗಿ ಲಕ್ಷಣವಾಗಿ ಕಂಡುದರಿಂದ ಕೃಷ್ಣಕಾಂತನು ಈ ಶುಭಾಹ್ವಾನಕ್ಕೆ ಸಂತೋಷವಾಗಿ ಒಪ್ಪಿಕೊಂಡಿದ್ದನು. ಹಾಗೆಯೇ ಮಾರಣೇದಿನ ಅವನು ಮಾಲತಿಯ ಊರಿಗೆ ಹೋದನು. ಅಲ್ಲಿಗೆ ಹೋಗಲು ಒಂದು ಕಾಡು ದಾರಿಯನ್ನು ಹಿಡಿದು ಹೋಗ ಬೇಕಾಗಿತ್ತು. ಅವನು ಹೋಗುವಾಗ ಅವನ ನಾಟಕ ನೋಡಲು ಬಂದ ಅನೇಕ ಮಂದಿ ಅವನೊಂದಿಗಿದ್ದರು.

ಮಾಲತಿಯ ತಾಯಿತಂದೆಯರು ಕೃಷ್ಣಕಾಂತನನ್ನು ಅತ್ಯಾದರದಿಂದ ಸ್ವಾಗತಮಾಡಿ, "ನೀನು ಅಳಿಯ ನಾಗುವುದು ನಮ್ಮ ಭಾಗ್ಯವೆನ್ನಬೇಕು. ಆದರೆ ಒಂದು, ನೀನು ನಾಟಕದಲ್ಲಿ ನಟಿಸುವುದನ್ನು ಬಿಟ್ಟು, ನಮ್ಮ ಮನೆಯಲ್ಲೇ ಇದ್ದು ಬಿಡಬೇಕು. ಹಾಗಾದರೇನೇ ಈ ಮದುವೆ ಸಾಧ್ಯ" ಎಂದರು.

ಮಾಲತಿಯ ತಂದೆತಾಯಿಯರು ಬಹು ದೊಡ್ಡ ಆಸ್ತಿವಂತರಾಗಿದ್ದರು. ಅವರಿಗೆ ವ್ಯವಸಾಯವು ಮಾತ್ರವಲ್ಲದೆ, ವರ್ತಕವ್ಯಾಪಾರಗಳು ಕೂಡಾ ಇದ್ದುವು. ಅಳಿಯನು ಮನೆಯಲ್ಲೇ ಇದ್ದು ಯಜಮಾನಿಕೆ ನಡೆಸಬೇಕೆಂಬುದು ಅವರ ಉದ್ದೇಶ.

ಕೃಷ್ಣಕಾಂತನು ಮಾಲತಿಯನ್ನು ಪ್ರತ್ಯೇಕವಾಗಿ ನೋಡಿ, "ನನ್ನ ನಟನೆಗೆ ದೊಡ್ಡ ಹೆಸರಿರುವಾಗ ಅದನ್ನು ವೃಥಾ ಕಳೆದುಕೊಳ್ಳಲು ನನಗೆ ಇಷ್ಟವಿಲ್ಲ. ನಿನ್ನ ತಂದೆತಾಯಿಗಳಿಗೆ ನಾನು ನಾಟಕದಲ್ಲಿ ನಟಿಸುವುದು ಇಷ್ಟವಿಲ್ಲವೆನ್ನುವರು. ಆದರೆ ನಿನ್ನ ಅಭಿಪ್ರಾಯವೇನೆಂದು ಹೇಳುವೆಯಾ ?" ಎಂದು ಕೇಳಿದನು.

ಕೃಷ್ಣಕಾಂತನು ನಾಟಕದಲ್ಲಿ ನಟಿಸುವುದು ತನಗೂ ಇಷ್ಟವಿಲ್ಲವೆಂದು ಮಾಲತಿಯೂ ಹೇಳಿಬಿಟ್ಟಳು.



ಯಾವುದಕ್ಕೂ ಒಂದು ವಾರದಮೇಲೆ ಮತ್ತೆ ಬಂದು ಹೇಳುವೆನೆಂದು ಹೇಳಿ, ಕೃಷ್ಣಕಾಂತನು ಅಲ್ಲಿಂದ ಹಿಂದಿರುಗಿ ಪ್ರಯಾಣಮಾಡಿದನು.

ಈ ಸಾರಿಯ ಪ್ರಯಾಣದಲ್ಲಿ ಅವನು ಒಬ್ಬಂಟಿಗ ನಾಗಿದ್ದನು. ಕಾಡಿನ ದಾರಿಯಲ್ಲಿ ಅವನು ನಡೆಯುತ್ತಿದ್ದಾಗ ನಾಲ್ಕುಮಂದಿ ದಾರಿದೋಚುವ ಕಳ್ಳರು ಅವನನ್ನು ಅಡ್ಡಗಟ್ಟಿದರು. ಕೃಷ್ಣಕಾಂತನು ಉತ್ತಮವಾದ ಜರಿಯ ವಸ್ತ್ರಗಳನ್ನು ಧರಿಸಿ ಕೊಂಡಿದ್ದನು. ಕೊರಳಲ್ಲಿ ಹುಲಿಯುಗುರಿನ ಪದಕ ದೊಂದಿಗೆ ಚಿನ್ನದ ಸರವಿದ್ದಿತು. ಬೆರಳುಗಳಲ್ಲಿ ಬೆಲೆ ಬಾಳುವ ವಜ್ರಗಳ ಉಂಗುರಗಳಿದ್ದುವು. ಕಳ್ಳರನ್ನು ನೋಡಿದಕೂಡಲೇ ಅವನು ತಟಸ್ಥನಾಗಿ ಎಂಜಲು ನುಂಗತೊಡಗಿದನು.

"ಮೇಲೇ ಕೆಳಗೇ ನೋಡುವುದೇನನ್ನು ? ತೆಗೀ ನಿನ್ನ ಕೊರಳಿನ ಸರವನ್ನೂ ಉಂಗುರಗಳನ್ನೂ, ಧರಿಸಿಕೊಂಡ ವಸ್ತ್ರಗಳನ್ನು ಕೂಡಾ ಜಲ್ದೀ



ತೆಗೀ !" ಎಂದು ಕಳ್ಳರು ಸುರಿಗತ್ತಿಗಳನ್ನು ಎತ್ತಿ ಜೋರುಮಾಡಿದರು.

ಆ ಸಮಯದಲ್ಲಿ ಅಕಸ್ಮಾತ್ತಾಗಿ ಒಬ್ಬ ಯುವಕನು ಓಡೋಡಿ ಬಂದನು. ಅವನ ಕೈಯಲ್ಲಿ ಯಾವ ಆಯುಧಗಳೂ ಇರಲಿಲ್ಲ. ಬಂದವನೇ ತೋಳು ತಟ್ಟಿ ತೊಡೆಬಡಿದು ಗರ್ಜಿಸಿ, ಕಳ್ಳರಿಬ್ಬರನ್ನೂ ದೂಡಿದನು. ಕೃಷ್ಣಕಾಂತನಿಗೆ ಅವನು ಯಾರೆಂದು ಕೂಡ ಗೊತ್ತಿರಲಿಲ್ಲ.

ನಾಲ್ವರು ಕಳ್ಳರೂ ಆ ಯುವಕನೂ ಕೈಕೈ ಕಲೆ ಬಿದ್ದರು. ಹೊಸ ಯುವಕನು ಚೆನ್ನಾಗಿ ನುರಿತ ಮಲ್ಲವೀರನ ಹಾಗೆ ಕಳ್ಳರನ್ನು ಹಣ್ಣುಹಣ್ಣು ಮಾಡುತ್ತ ಒಬ್ಬನ ಕೈಯ ಕತ್ತಿಯನ್ನು ಎಳೆದು ಕೊಂಡನು. ಅಷ್ಟು ನೋಡಿದ ಕೂಡಲೇ ಕಳ್ಳರು ಭಯಕಂಪಿತರಾಗಿ ಅಲ್ಲಿಂದ ಓಡಿಹೋದರು.

"ಯಾರು ನೀನು ? ಮಹಾನುಭಾವಾ! ಸಮಯಕ್ಕೆ ದೇವರ ಹಾಗೆ ಬಂದು ಕಾಪಾಡಿದೆ !" ಎಂದನು ಕೃಷ್ಣಕಾಂತ. "ನನ್ನ ಹೆಸರು ಏಕಾಗ್ರ. ಶಕ್ತಿಯಿದ್ದಷ್ಟರ ಮಟ್ಟಿಗೆ ಜನರಲ್ಲಿ ಅನ್ಯಾಯಗಳನ್ನೂ ಅಕ್ರಮಗಳನ್ನೂ ನಡೆಯದಂತೆ ತಡೆಯುವುದನ್ನೇ ಲಕ್ಷ್ಯವಾಗಿ ಇಟ್ಟುಕೊಂಡಿದ್ದೇನೆ" ಎಂದನು ಆ ಯುವಕ.

"ಸರಿಯಾದ ಹೊತ್ತಿಗೆ ಹೇಗೆಬಂದೆ ?" ಎಂದು ಕೃಷ್ಣಕಾಂತನು ಕೇಳಿದನು.

"ಪಕ್ಕದ ಗ್ರಾಮದಲ್ಲಿ ಮಹಾನಟರಾದ ಕೃಷ್ಣ ಕಾಂತರು ಇದ್ದಾರೆಂದು ಸುದ್ದಿ ಕೇಳಿದೆ. ಅವರ ದರ್ಶನ ಮಾಡಬೇಕೆಂದು ಬಹಳ ಕಾಲದಿಂದ ಪ್ರಯತ್ನಿ ಸುತ್ತಿದ್ದೆ. ಅದಕ್ಕೇ ಹೊರಟಿದ್ದೇನೆ" ಎಂದನು ಏಕಾಗ್ರ.

ತಾನೇ ಕೃಷ್ಣಕಾಂತನೆಂದು ಹೇಳೋಣವೆಂದು ನಾಲಗೆ ತುದಿಯವರೆಗೂ ಬಂತು ಕೃಷ್ಣಕಾಂತನಿಗೆ. ಸ್ವಲ್ಪ ಹೊತ್ತು ಯುವಕನನ್ನು ಆಡಿಸೋಣವೆಂದು ಕೊಂಡು,"ಆ ನಾಟಕದವನೊಂದಿಗೆ ನಿನಗೇನು ಕೆಲಸ?" ಎಂದು ಕೇಳಿದನು.

"ಅವರು ಕೇವಲ ನಾಟಕದವರೇನಲ್ಲ. ಅವತಾರ ಪುರುಷ ! ಗಜೇಂದ್ರನ ವೇಷದಲ್ಲಿ ಅವರನ್ನು ನೋಡಿದ್ದೇನೆ.ಆಗ ನನ್ನಲ್ಲಿ ಉಂಟಾಗುವ ವೀರಾವೇಶವು ಅಷ್ಟಿಷ್ಟಲ್ಲ. ನಾನೂ ಗಜೇಂದ್ರನ ಹಾಗೆಯೇ ಪೀಡಿತ ಪ್ರಜೆಗಳಿಗೆ ಸಹಾಯಕನಾಗಬೇಕೆಂದು ದೀಕ್ಷೆಹಿಡಿದೆನು. ಕೃಷ್ಣಕಾಂತರನ್ನು ನೋಡಿ, ನನ್ನ ಹಾಗೆ ಇನ್ನೆಷ್ಟೋ ಯುವಕರನ್ನು ಪ್ರಭಾವಿತರನ್ನಾಗಿ ಮಾಡಲು, ಇನ್ನೂ ವಿಸ್ತಾರವಾಗಿ ನಾಟಕವಾಡ ಬೇಕೆಂದು ಅವರನ್ನು ಕೇಳಲಿದ್ದೇನೆ" ಎಂದನು ಏಕಾಗ್ರ.

"ಹಾಗೇನು ? ನೀನು ಅವನ ನಾಟಕನೋಡಿರುವೆ ಯಷ್ಟೆ ? ಆಗಲೇ ಏಕೆ ಅವನನ್ನು ನೋಡಲಿಲ್ಲ ?" ಎಂದು ಕೃಷ್ಣಕಾಂತನು ಕೇಳಿದನು.

"ಮೊದಲು ನಾನು ಕೂಡಾ ಗಜೇಂದ್ರನ ಹಾಗೆಯೇ ಆಗಬೇಕೆನಿಸಿತು. ಈಗ ನಾನು ಮಾಡುವ ಕಾರ್ಯ ಗಳನ್ನು ಅನೇಕ ಜನರು ಪ್ರಶಂಸಿಸುವುದನ್ನು

ನೋಡುವಾಗ, ಇದಕ್ಕೆಲ್ಲಾ ಕೃಷ್ಣಕಾಂತರೇ ಕಾರಣ ವೆಂದು ಈಗ ತೋರುತ್ತದೆ. ಇನ್ನು ನೀವು ಜಾಗ್ರತೆಯಿಂದ ಹೋಗಿರಿ. ನಾನು ಹೊರಡುತ್ತೇನೆ" ಎಂದನು ಏಕಾಗ್ರ.

ಕೃಷ್ಣಕಾಂತನು ಸಪ್ಪಗಾದನು. ತನ್ನದೊಂದು ಉಂಗುರವನ್ನು ಏಕಾಗ್ರನಿಗೆ ಕೊಡಲು ನೋಡಿದನು. ಅವನು ಬೇಡವೆಂದು ಹೇಳಿಬಿಟ್ಟನು.

"ನಾನು ಕೂಡಾ ಕೃಷ್ಣಕಾಂತನನ್ನು ನೋಡ ಬೇಕೆಂತಲೇ ಹೊರಟವನು. ಅವನೀಗ ಆ ಗ್ರಾಮದಲ್ಲಿಲ್ಲ. ರಾಜಧಾನಿಗೆ ಹೋಗಿದ್ದಾನಂತೆ" ಎಂದು ಏಕಾಗ್ರನೊಂದಿಗೆ ಹೇಳಿದನು ಕೃಷ್ಣಕಾಂತ.

ಅವನು ಹೊರಟುಹೋದಮೇಲೆ ಕೃಷ್ಣಕಾಂತನು ಮಾಲತಿಯ ಊರಿಗೆ ಹೋಗಿ ಅವಳೊಂದಿಗೆ "ನಿನಗಾಗಿ ನಾಟಕದಲ್ಲಿ ನಟಿಸುವುದನ್ನು ಬಿಟ್ಟು ಬಿಡುತ್ತೇನೆ." ಎಂದು ಹೇಳಿದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಕೃಷ್ಣಕಾಂತನಿಗೆ ಏನಾಯಿತು ? ಅಷ್ಟು ಬೇಗನೇ ಮನಸ್ಸು ಬದಲಾಯಿಸಿ ಮಾಲತಿಯೊಂದಿಗೆ ಮದುವೆಯಾಗಲು ಏಕೆ ಒಪ್ಪಿದ ? ಅವನಿಗೆ ನಾಟಕಗಳ ಮೇಲೆ ಕೊಕ್ಕರಿಕೆಯುಂಟಾಯಿತೆ ? ಕೀರ್ತಿಯ ಮೇಲೆ ಅಲ್ಪಭಾವನೆ ಬಂದಿತೆ ? ಅಥವಾ ಅಸೂಯೆಯೋ ? ಈ ಸಂದೇಹಗಳಿಗೆ ತಕ್ಕ ಸಮಾಧಾನ ಹೇಳದಿದ್ದರೆ ನಿನ್ನ ತಲೆ ನುಚ್ಚುನೂರಾಗಿ ಹೋಗುತ್ತದೆ" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು :

"ಅಂತಹ ಯಾವ ಕಾರಣಗಳಿಂದಲೂ ಕೃಷ್ಣ ಕಾಂತನ ಮನಸ್ಸಿನ ಪರಿವರ್ತನೆಯಾದುದಲ್ಲ. ತನ್ನ ಗಜೇಂದ್ರ ಪಾತ್ರದಿಂದ ಅವನು ಅನೇಕ ಯುವಕರನ್ನು ಅನ್ಯಾಯಗಳನ್ನು ಇದಿರಿಸುವ ವೀರಸಾಹಸಿಗರನ್ನಾಗಿ ಪರಿವರ್ತಿಸಿದ್ದಾನೆ. ಆದರೆ ತಾನು ಮಾತ್ರ ಕಳ್ಳರ ಮುಂದೆ ನಿರ್ವೀರ್ಯನಾಗಿ ಅಂಜುಕುಳಿಯಾಗಿ ಪ್ರವರ್ತಿಸಿದ್ದಾನೆ. ನಿಜಜೀವನಕ್ಕೆ ತನ್ನ ನಟನೆ ಉಪಯೋಗವಾಗದೆ ಹೋಗಿದೆ. ಈ ಅನುಭವದಿಂದ ಕೃಷ್ಣಕಾಂತನಿಗೆ ತಾನು ನಟಿಸುವ ಗಜೇಂದ್ರನ ಪಾತ್ರ ತನ್ನ ಮೇಲೆ ಎಂತಹ ಪ್ರಭಾವವನ್ನೂ ತೋರಿಸ ಲಿಲ್ಲವೆಂದು ಸ್ಪಷ್ಟವಾಯಿತು. ಇನ್ನು ತನ್ನ ನಿಜ ರೂಪವು ಹತ್ತು ಮಂದಿಗೆ ಗೊತ್ತಾದರೆ ಇಷ್ಟುಕಾಲ ಗಜೇಂದ್ರನ ಪಾತ್ರದಿಂದ ಉಂಟಾದ ಕೀರ್ತಿಯ ಪ್ರಭಾವ ಮಂಗಿ ಹೋಗಿಬಿಡುತ್ತದೆ. ಅದಕ್ಕೇ ಅವನು ಮಾಲತಿಯನ್ನು ವಿವಾಹ ಮಾಡಿಕೊಂಡು ಅಜ್ಞಾತ ವಾಗಿ ಬದುಕಲು ಸಿದ್ಧನಾದನು."

ಹೀಗೆ ರಾಜನಿಗೆ ಮೌನಭಂಗವಾಗುತ್ತಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ, ಮರದಕೊಂಬೆಯಲ್ಲಿ ನೇತಾಡತೊಡಗಿತು.



# ಅಸಲು ಕಾರಣ

ಒಬ್ಬರು ಜಮೀನ್ದಾರರಿಗೆ ಹೊಸತಾಗಿ ಅಡಿಗೆಗೆ ಬಂದವನು, ಏನೂ ತಿಳಿಯದೆ ಎಲ್ಲದಕ್ಕೂ ತಲೆಯಾಡಿಸುವ ಹೆಡ್ಡನ ಹಾಗೆ ಕಂಡನು.

ಜಮೀನ್ದಾರರು ಅವನನ್ನು ಕುರಿತು ಸ್ವಲ್ಪ ವಿಚಾರಿಸಿ ನೋಡೋಣವೆಂದು, ಕೆಲವು ಪ್ರಶ್ನೆಗಳನ್ನು ಮಾಡಿ, "ಹೌದಪ್ಪಾ, ಅನೇಕ ಕಡೆಯಲ್ಲಿ ಅಡಿಗೆಯವನಾಗಿದ್ದೆ ಅಂದೆಯಲ್ಲಾ ? ಆ ಕೆಲಸ ಏಕೆ ಕಳೆದು ಕೊಂಡೆ? ಆಗಾಗ ಕೆಲಸ ತಪ್ಪಿಸಿಕೊಳ್ಳುತ್ತಿದ್ದೆಯಾ ?" ಎಂದು ಕೇಳಿದರು.

"ಹಾಗೆ ತಪ್ಪಿಸಿಕೊಂಡರೆ ಮನೆಯಲ್ಲಿದ್ದವರಿಗೆ ಕಷ್ಟವಲ್ಲವೇ ಸ್ವಾಮಿ ?" ಎಂದನು ಅಡಿಗೆಯವನು.

"ಹಾಗಾದರೆ ಅಡಿಗೆ ಮಾಡುವಾಗಲೇ ರುಚಿ ನೋಡುವ ನೆವನದಲ್ಲಿ ಮಾಡಿದ್ದೆಲ್ಲಾ ತಿನ್ನುವ ಕೆಟ್ಟ ಅಭ್ಯಾಸವಿದೆಯೇ ?" ಎಂದರು ಜಮೀನ್ದಾರರು.

"ಹಾಗೆ ಎಷ್ಟು ತಿನ್ನಲಾದೀತು ಸ್ವಾಮಿ ? ಎಲ್ಲರದೂ ಆದ ಮೇಲೆ ಉಳಿದದ್ದು ನಾನೇ ಅಲ್ಲವೇ ಉಣ್ಣುವುದು ?" ಎಂದನು ಅಡಿಗೆಯವ.

"ಅಡ್ಡಿಗೇ ಸಾಮಾಗ್ರಿಗಳನ್ನು ಕದ್ದುಕೊಳ್ಳುವ ಅಲ್ಪಬುದ್ಧಿ ಇಲ್ಲವಷ್ಟೆ ?" ಕೇಳಿದರು ಜಮೀನ್ದಾರರು.

"ಇಡೀ ಅಡಿಗೇ ಮನೆಯೇ ನನ್ನ ಕೈ ಕೆಳಗಿರುವಾಗ ಅಂಥಾ ಕೆಟ್ಟ ಕೆಲಸ ಯಾಕೆ ಮಾಡಲಿ ?" ಎಂದನು ಅಡಿಗೆಯವನು.

"ಹಾಗಾದರೆ ಎಲ್ಲಾ ಕಡೆಗಳಲ್ಲಿ ಕಲಸ ಹೋಗಲು ಕಾರಣವಾದರೂ ಏನು ?" ಎಂದು ಬೇಸರದಿಂದ ಕೇಳಿದರು ಜಮೀನ್ದಾರರು.

"ನಾನು ಬುದ್ಧಿ ಸ್ಥಿರವಿಲ್ಲದವನಂತೆ. ಆಗಾಗ ಅಡಿಗೆಯವನೆಂಬುದನ್ನು ಮರೆತು, ತೋಟಗಾರನ ಕೆಲಸಕ್ಕೂ, ಕುದುರೆಗೆ ಮಾಲೀಷ್ ಮಾಡುವುದಕ್ಕೂ ಹೋಗುತ್ತೇನೆ ಅಂತ ಕೆಲಸದಿಂದ ಅಟ್ಟಿಬಿಡುತ್ತಾರೆ ಸ್ವಾಮಿ" ಎಂದನು ಅಡಿಗೆಯವನು.






# ಮಂತ್ರಿ ಪದವಿ

ಹಿಂದೆ ಚಿತ್ರಪುರಿ ಎಂಬುದೊಂದು ರಾಜ್ಯವಿದ್ದಿತು. ಅಲ್ಲಿಯ ರಾಜನಿಗೆ ಸೋಮೇಶ್ವರನೆಂಬ ಮುಖ್ಯ ಮಂತ್ರಿ ಯೊಬ್ಬನು ಹೆಸರಾಗಿದ್ದನು. ಅವನು ಎರಡು ತಲೆಮಾರಿನ ರಾಜರಿಗೆ ಪರಿಪಾಲನೆಯ ವಿಷಯದಲ್ಲಿ ಆಲೋಚನೆ ಹೇಳುವ ವಿವೇಕವಂತನೆಂದೂ, ದೊಡ್ಡ ಸಮರ್ಥನೆಂದೂ ಹೆಸರು ಗಳಿಸಿಕೊಂಡಿದ್ದನು.

ಅವನಿಗೆ ಎಂಭತ್ತು ವರ್ಷ ಪ್ರಾಯವಾದಾಗ ಇನ್ನು ತಾನು ಮಂತ್ರಿ ಪದವಿಯಿಂದ ವಿರಮಿಸಿ ಕೊಳ್ಳಬೇಕೆಂದುಕೊಂಡು, ಆ ಸಂಗತಿಯನ್ನು ರಾಜನಾದ ಅವಂತನೊಂದಿಗೆ ಹೇಳಿದನು. ಅವಂತನು ರಾಜ್ಯಾಧಿಕಾರಕ್ಕೆ ಬಂದು ಆಗ ಮೂರು ವರ್ಷ ವಷ್ಟೇ ಆಗಿತ್ತು. ದೊಡ್ಡ ದಕ್ಷತೆಯೂ ರಾಜಭಕ್ತಿಯೂ ತುಂಬಿಕೊಂಡಿರುವ ವೃದ್ಧಮಂತ್ರಿ ವಿರುಮಿಸುವ ನೆಂಬುದನ್ನು ತಿಳಿದು ರಾಜನು ಬಹಳವಾಗಿ ಚಿಂತಿಸಿ, ಬೇರೆ ಉಪಾಯವಿಲ್ಲದೆ ಆತನೊಂದಿಗೆ, "ತಮ್ಮ ಸ್ಥಾನದಲ್ಲಿ ಇರತಕ್ಕ ಅರ್ಹತೆಯುಳ್ಳವನನ್ನು ತಾವೇ ಆರಿಸಿಕೊಡಬೇಕು" ಎಂದು ಕೇಳಿಕೊಂಡನು.

ಸೋಮೇಶ್ವರನು ಅದಕ್ಕೆ ಒಪ್ಪದೆ, "ನಮ್ಮ ಪೀಳಿಗೆ ಮುಗಿದುಹೋಯಿತು. ಈಗಿನ ಹೊಸ ತಲೆ ಮಾರಿನವರ ಶಕ್ತಿಸಾಮರ್ಥ್ಯಗಳನ್ನು ಕುರಿತು ನನಗೆ ಅಷ್ಟೇನೂ ತಿಳಿಯದು. ಆದುದರಿಂದ ಮಂತ್ರಿಯನ್ನು ನೀವೇ ಆರಿಸಿಕೊಳ್ಳುವುದು ಒಳ್ಳೆಯದು" ಎಂದನು.

ಅವಂತರಾಜನು ಮಂತ್ರಿಪದವಿಗೆ ಅರ್ಹರಾದ ವರಿಗಾಗಿ ದೇಶದೊಳಗೆಲ್ಲಾ ಡಂಗುರಸಾರಿಸಿದನು. ಆಮೇಲೆ ಆ ಪದವಿಯನ್ನು ಇಚ್ಛಿಸಿ ಬಂದ ಅನೇಕ ಮಂದಿ ವಿದ್ಯಾಧಿಕರಾದ ಯುವಕರಲ್ಲಿ ರಾಜನಿಗೆ ಅನಂತವರ್ಮ, ಕಪಿಲನಾಥ, ರಾಮಮಿಶ್ರ ಎಂಬವರು ಹೆಚ್ಚಿನ ಅರ್ಹತೆಯುಳ್ಳರಾಗಿ ಕಂಡರು.

ಅವರಲ್ಲಿ ಯಾರನ್ನು ಹೆಕ್ಕಿಕೊಳ್ಳುವುದೆಂದು ಅವಂತರಾಜನು ಚೆನ್ನಾಗಿ ಆಲೋಚಿಸಿ ಒಂದು ನಿಶ್ಚಯಕ್ಕೆ ಬಂದು, ಮೊದಲು ಅನಂತವರ್ಮನನ್ನು ತನ್ನ ಆಲೋಚನಾ ಮಂದಿರಕ್ಕೆ ಕರೆಯಿಸಿ ಕೊಂಡನು.

"ನೀವು ಮಂತ್ರಿಪದವಿ ನಿರ್ವಹಿಸುವ ಕಾಲದಲ್ಲಿ ಒಂದು ಬಡ ಕುಟುಂಬವು ನಿಮ್ಮ ಹತ್ತಿರ ಬಂದು, ತಾವು ಎರಡು ದಿನಗಳಿಂದ ಉಪವಾಸವಿದ್ದೇವೆಂದೂ, ಏನಾದರೂ ಸಹಾಯ ಮಾಡಬೇಕೆಂದೂ ಕೇಳಿದರೆ ನೀವೇನು ಮಾಡುವಿರಿ?" ಎಂದು ಪ್ರಶ್ನಿಸಿದನು.

ವಿ. ಬಾಬುರಾವು

ಈ ಪ್ರಶ್ನೆಗೆ ಅನಂತವರ್ಮನು ಎರಡು ಕ್ಷಣ ಆಲೋಚನೆಮಾಡಿ "ಮಹಾರಾಜರೆ, ಆ ಬಡ ಕುಟುಂಬಕ್ಕೆ ಎಲ್ಲಾ ವಿಧದಲ್ಲಿಯೂ ಸಹಾಯಮಾಡಿ ಮತ್ತೆ ಎಂದಿಗೂ ಅವರಿಗೆ ಹೊಟ್ಟೆಯ ಕಷ್ಟ ಬಾರದಂತೆ ನೋಡುತ್ತೇನೆ" ಎಂದು ಉತ್ತರ ಕೊಟ್ಟನು.

ಆಮೇಲೆ ರಾಜನು ಕಪಿಲನಾಥನನ್ನು ಕರೆಯಿಸಿ ಅವನಿಗೂ ಅದೇ ಪ್ರಶ್ನೆಯನ್ನು ಕೇಳಿದನು. ಕಪಿಲನಾಥನು ಒಂದು ಕ್ಷಣ ಆಲೋಚನೆ ಮಾಡಿ, "ಮಹಾರಾಜಾ, ಆ ಕುಟುಂಬಕ್ಕೆ ಹಾಗೆ ಉಪವಾಸ ಬೀಳುವ ಕಷ್ಟ ಏಕೆ ಬಂತೆಂದು ಅದರ ಪೂರ್ವಾಪರಗಳನ್ನು ಕುರಿತು ತಿಳಿಯಾಗಿ ವಿಚಾರಿಸುತ್ತೇನೆ. ಆಮೇಲೆ ಆ ಕುಟುಂಬಕ್ಕೆ ಸಹಾಯಮಾಡಿ, ರಾಜ್ಯದಲ್ಲಿರುವ ಅಂಥವರಿಗೆ ಆಹಾರವಿಲ್ಲದ ದುಸ್ಥಿತಿ ಬಾರದ ಹಾಗೆ ತಕ್ಕ ಏರ್ಪಾಡು ಮಾಡಿಸುತ್ತೇನೆ" ಎಂದನು.

ಅವನನ್ನು ಕಳುಹಿಸಿ ರಾಜನು ರಾಮಮಿಶ್ರನನ್ನು ಕರೆಯಿಸಿ, ಮೊದಲಿನ ಇಬ್ಬರಿಗೆ ಕೇಳಿದ ಅದೇ ಪ್ರಶ್ನೆಯನ್ನೇ ಕೇಳಿದನು.

ಆ ಪ್ರಶ್ನೆ ಕೇಳಿದ ಕೂಡಲೇ ರಾಮಮಿಶ್ರನು "ಮಹಾರಾಜಾ, ನನ್ನ ಮಂತ್ರಿ ಪದವಿಯ ಕಾಲದಲ್ಲಿ ದೇಶದಲ್ಲಿ ಯಾರಿಗಾದರೂ ಹೊಟ್ಟೆಗೂ ಬಟ್ಟೆಗೂ ಕೊರತೆಯಾಯಿತೆಂದು ಕೇಳಿದ ಮರುಕ್ಷಣದಲ್ಲೇ ನಾನು ನನ್ನ ಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟುಬಿಡುತ್ತೇನೆ" ಎಂದನು. ಆ ಪ್ರತ್ಯುತ್ತರವನ್ನು ಕೇಳಿ ರಾಜನು ಆಶ್ಚರ್ಯಪಟ್ಟು, "ಮಂತ್ರಿಪದವಿಯನ್ನೇ ಬಿಡುವಿರಾ? ಏಕೆ?" ಎಂದು ಕೇಳಿದನು.

ಬಹಳ ಕಾಲದಿಂದ ಸಾಗಿಬರುವ ತಮ್ಮ ಒಳ್ಳೆಯ ಪರಿಪಾಲನೆಯಲ್ಲಿ, ವೃದ್ಧರಾಗಿ ಹೋದ ಮಹಾ ಮಂತ್ರಿಯವರ ಸೂತ್ರಚಾಲನೆಯಲ್ಲಿ ರಾಜ್ಯದೊಳಗೆ ಯಾರೊಬ್ಬರಿಗೂ ಇಂದಿನವರೆಗೂ ಹೊಟ್ಟೆ ಬಟ್ಟೆಗಳಿಗೆ ಗತಿಯಿಲ್ಲದಂತಹ ದೀನಾವಸ್ಥೆ ಬರಲಿಲ್ಲ. ಹಾಗಿರುವಾಗ ನಾನು ಮಂತ್ರಿ ಯಾಗಿರುವ ಕಾಲದಲ್ಲಿ ಪ್ರಜೆಗಳೊಳಗಿನ ಕೆಲವರಿಗಾದರೂ ಅಂತಹ ಕೆಟ್ಟ ಪರಿಸ್ಥಿತಿಯುಂಟಾಯಿತೆಂದರೆ ಅದಕ್ಕೆ ಮಂತ್ರಿಯಾದ ನನ್ನ ಅಸಮರ್ಥತೆಯೇ ಕಾರಣವಾಗುತ್ತದೆ. ಅಂದರೆ ನಾನು ಮಂತ್ರಿ ಪದವಿಗೆ ಅರ್ಹನಲ್ಲವೆಂದೇ ಆಯಿತು. ಆದುದರಿಂದ ನಾನು ಮಂತ್ರಿ ಪದವಿ ಬಿಟ್ಟುಕೊಟ್ಟು, ಮತ್ತಾರಾದರೂ ಸಮರ್ಥರಿಗೆ ಆ ಪದವಿ ಸಿಕ್ಕಲು ಅವಕಾಶ ಮಾಡುತ್ತೇನೆ" ಎಂದನು ರಾಮಮಿಶ್ರ.

ಅವನು ಹೇಳಿದ ಮಾತುಗಳು ರಾಜನನ್ನು ಸಂತೋಷಪಡಿಸಿದುವು. ಅವನನ್ನು ಮೆಚ್ಚಿ ತೃಪ್ತನಾಗಿ, ಆ ದಿನವೇ ರಾಮಮಿಶ್ರನನ್ನು ಚಿತ್ರಪುರಿ ರಾಜ್ಯದ ಮುಖ್ಯಮಂತ್ರಿಯಾಗಿ ನಿಯಮಿಸಿರುವುದನ್ನು ಮಹಾಸಭೆಯಲ್ಲಿ ಪ್ರಕಟಿಸಿದನು.





# ಅಳಿಯನ ಅಳಲು

ಒಂದು ಊರಿನಲ್ಲಿ ನಾರಾಯಣನೆಂಬವನು ಹೊಸದಾಗಿ ಮದುವೆ ಮಾಡಿಕೊಂಡು ತನ್ನ ಹೆಂಡತಿ ರುಕ್ಮಿಣಿಯೊಂದಿಗೆ ಹೊಸ ಬಿಡಾರದಲ್ಲಿ ಸಂಸಾರ ಹೂಡಿದನು. ಮನೆಗೆ ಬೇಕಾದ ಸಾಮಾನುಗಳನ್ನು ಒಂದೊಂದಾಗಿ ತಂದು ಹಾಕಿದನು. ನಾರಾಯಣನ ಅತ್ತೆ ಅಲ್ಲಿಗೆ ಬರುವಳೆಂದು ಕಾಗದ ಬಂದಿತು. ಆಕೆಯ ಜೊತೆಯಲ್ಲಿ ಇನ್ನೊಬ್ಬಳು ಮಗಳೂ ಅಲ್ಲಿಗೆ ಬರುತ್ತಾಳಂತೆ. ಕಾಗದ ಓದಿ ನಾರಾಯಣನ ಮುಖ ಬಿಳಿಚಿಕೊಂಡಿತು. "ಎರಡು ವಾರ ಮುಗಿಯಿತೋ ಇಲ್ಲವೋ, ಅಷ್ಟರೊಳಗೆ ನಿನ್ನನ್ನು ಕುರಿತು ಅತ್ತೆಯವರಿಗೆ ಚಿಂತೆ ಬಂತೆಂದು ಕಾಣುತ್ತೆ" ಎಂದನು ಹೆಂಡತಿಯೊಂದಿಗೆ ಕಾಗದವನ್ನು ಕೊಡುತ್ತಾ.

ರುಕ್ಮಿಣಿ ಕಾಗದ ಓದಿ, "ಅರೆ! ನಾಳೇನೇ ಬರುತ್ತಾರೆ. ನನ್ನ ನೋಡುವ ಚಿಂತೆಯೇನೂ ಅಲ್ಲ. ಬರೆದಿದ್ದಾರಲ್ಲಾ, ಅಮ್ಮನ ಆರೋಗ್ಯ ಚೆನ್ನಾಗಿಲ್ಲಂತೆ. ಹವೆ ಬದಲಾವಣೆಗೂ, ನಗರದಲ್ಲಿ ವೈದ್ಯ ಮಾಡಿಸಿಕೊಳ್ಳಲಿಕ್ಕೂ ಬರುವುದು. ಹಾಗೆಯೇ ನನ್ನ ತಂಗೀಗೆ ನಗರದಲ್ಲಿ ಒಳ್ಳೆಯ ಸಂಬಂಧ ಸುಲಭದಲ್ಲಿ ಕುದುರುತ್ತದೆಂದೂ ಅಪ್ಪನ ಆಶೆ" ಎಂದಳು.

ನಾರಾಯಣನಿಗೆ ಬರುವ ಸಂಬಳ ನಾಲ್ಕು ಮಂದಿಗಳ ಹೊಟ್ಟೆಗೂ, ಔಷಧಕ್ಕೂ ಸಾಕಾಗುವಷ್ಟು ಇರಲಿಲ್ಲ. ಆದರೆ ಭಿಡೆ ಭಾರದವನಾದುದರಿಂದ ಏನೂ ಹೇಳದೆ ಸುಮ್ಮನಿದ್ದು ಬಿಟ್ಟನು.

ಅಂದುಕೊಂಡ ಹಾಗೆ ಮರುದಿನ ರುಕ್ಮಿಣಿಯ ತಾಯಿ ನಾರಾಯಣನ ಮನೆಯ ಮುಂದೆ ಗಾಡಿಯಿಂದಿಳಿದಳು. ಗಂಟು ಹಿಡಿದುಕೊಂಡು ಮಗಳೂ ಕೆಳಗಿಳಿದಳು. ಅತ್ತೆ ಆಯಾಸಪಡುತ್ತ ಒಳಗೆ ಬಂದು ಒರಗಿ ಕುಳಿತು, ರುಕ್ಮಿಣಿ ತಂದು ಕೊಟ್ಟ ಒಂದು ಲೋಟ ಹಾಲನ್ನು ಕುಡಿದು "ಅಮ್ಮ! ಈ ನಿತ್ರಾಣದಿಂದಲೇ ಯಾವುದೋ ಒಂದು ದಿನ ಗೊಟಕ್ ಅನ್ನುತ್ತೇನೆ. ಅಷ್ಟರೊಳಗೆ ನಿನ್ನ ತಂಗೀಗೆ ಒಂದು ಮದುವೆ ಆಗಿ ಹೋದರೆ ಕೃಷ್ಣಾ ರಾಮಾ ಎನ್ನುತ್ತ ಕಾಲಕ್ಷೇಪ ಮಾಡೇನು. ಗಂಡು ಮಗಂದಿರಿಲ್ಲದ ನಮಗೆ ಅಳಿಯನೇ ಮಗ. ಆದಕ್ಕೇ ಈ ಹುಡುಗಿಯ ಮದುವೇ ಬಾಧ್ಯತೆ, ನನ್ನ ವೈದ್ಯದ ಬಾಧ್ಯತೆ ನಿಮ್ಮ ಮೇಲೆ ಹಾಕಿದ್ದಾರೆ ನಿಮ್ಮಪ್ಪ" ಎಂದು ತನ್ನ ಕಷ್ಟ ಸುಖಗಳನ್ನು ಹೇಳಿಕೊಂಡಳು. ಅವರ ಮಗಳ ಮದುವೆಯ ಬಾಧ್ಯತೆಯನ್ನು

ಎಂ. ಕೆ. ಈಶ್ವರರಾವ್

ತನ್ನ ಮೇಲೆ ಹಾಕಿರುವವರೆಂಬ ಮಾತು ಕೇಳಿ, ದೊಡ್ಡ ಬಂಡೆಗಲ್ಲು ಹೇರಿದ ಹಾಗೆ ಎನಿಸಿತು ನಾರಾಯಣನಿಗೆ. ಆದರೂ ಮೇಲು ನೋಟಕ್ಕೆ ನಗುವ ಹಾಗೆ ಹಲ್ಲು ತೋರಿಸುತ್ತ "ನ್ಯಾಯ ತಾನೇ ಅತ್ತೇ! ಆ ಬಾಧ್ಯತೆಗಳನ್ನು ಪ್ರತ್ಯೇಕ ಹಾಕಬೇಕೇ? ಅದು ನನ್ನ ಕರ್ತವ್ಯವೇ ಅಂದುಕೊಳ್ಳುತ್ತೇನೆ" ಎಂದನು.

"ನೋಡಿದೆಯಾ ಅಮ್ಮಾ, ನಾನು ಹೇಳಲಿಲ್ಲವೇ, ಬಾವನ ಮನಸ್ಸು ಬಂಗಾರಾ ಅಂತ?" ಎಂದು ಹೇಳುತ್ತಾ ರುಕ್ಮಿಣಿಯ ತಂಗಿ ಹೊಸ ಮಂಚದ ಮೇಲೆ ಧೊಪ್ಪೆಂದು ಕುಳಿತಳು. ಮಂಚದ ಕಾಲುಗಳು ಗೋಡೆಯ ಅಂಚಿಕೆ ತಾಗಿ ವಾರೆಯಾಗಿದ್ದುದರಿಂದ, ಅವಳದು ಸ್ವಲ್ಪ ಸ್ಥೂಲಶರೀರವಾದುದರಿಂದ, ಮಂಚದ ಕಾಲುಗಳು ನೆಲಕ್ಕೆ ಜಾರಿ ಲಟಕ್ಕನೆ ಮುರಿದು ಹೋಯಿತು. ಹೊಸ ಮಂಚದ ಗತಿ ಥಕ್ಕನೆ ಹಾಗಾದುದನ್ನು ನೋಡಿ ನಾರಾಯಣನಿಗೆ ಮೈಜು ಮುಗುಟ್ಟಿತು. ಒಂದು ವಾರ ದಿನಗಳು ಹಾಗೂ ಹೀಗೂ ಉರುಳಿದರೂ ಅತ್ತೆಯ ರೋಗವೇನೆಂಬುದು ನಾರಾಯಣನಿಗೆ ಗೊತ್ತಾಗಲಿಲ್ಲ. ಆಕೆಯ ಜೀರ್ಣಶಕ್ತಿ ಚೆನ್ನಾಗಿದೆ. ತಿನ್ನುಣ್ಣುವುದರಲ್ಲೇನೂ ಕಡಿಮೆಯಿಲ್ಲ. ಆದರೂ ಉಪವಾಸವಿರುವ ಹಾಗೆ, ತಿನ್ನುತ್ತಾ ಬಾಯಿ ರುಚಿ ಕೆಟ್ಟ ಹಾಗೆ ಸಂಕಟದ ರಾಗ ಆಗಾಗ ಎಬ್ಬಿಸುತ್ತಾಳೆ. ಆ ಮನೆ ನಗರದ ಮಧ್ಯದಲ್ಲಿರುವುದರಿಂದ ಅತ್ತೆಗೆ ನೆರೆಹೊರೆಯವರೊಂದಿಗೆ ಹರಟೆಯಿಂದಲೇ ಹೊತ್ತು ಕಳೆಯಲು ಬಲು ಖುಶಿ.

ಒಂದು ತಿಂಗಳು ಕಳೆಯುವಷ್ಟರಲ್ಲಿ ನಾರಾಯಣನು ಅಲ್ಲಿ ಇಲ್ಲಿ ಸಾಲಮಾಡಬೇಕಾಗಿ ಬಂತು. ಅವನ ಮುಖದ ಕಳೆ ಎಂದೋ ಹೋಗಿತ್ತು. ಒಂದು ದಿನ ಅವನ ಸಹೋದ್ಯೋಗಿ ಭದ್ರಣ್ಣ ಅವನನ್ನು ನೋಡಿ, "ನೋಡಪ್ಪಾ ನಾರಾಯಣಾ! ನೀನು ಇನ್ನೂ ಚಿಕ್ಕವನಾದುದರಿಂದ ನಿನ್ನ ಒಳಿತಿಗಾಗಿ ಹೇಳುತ್ತೇನೆ. ದುರಭ್ಯಾಸಗಳು ಮನುಷ್ಯನನ್ನು ಪತನದದಾರಿಗೆ ಒಯ್ಯುತ್ತವೆ" ಎಂದನು.

"ದುರಭ್ಯಾಸವೆ? ನನಗೋ? ಯಾರು ಹೇಳಿದರು ನಿನಗೆ?" ಎಂದು ಕೇಳಿದನು ನಾರಾಯಣ.



" ನಿನ್ನ ಸಾಲಗಳೇ ಹೇಳುತ್ತವೆ " ಎಂದ ಭದ್ರಣ್ಣ. ನಾರಾಯಣನು ತನ್ನ ಪ್ರಸ್ತುತ ಪರಿಸ್ಥಿತಿಯನ್ನು ಕುರಿತು ಭದ್ರಣ್ಣನೊಂದಿಗೆ ಹೇಳಿದನು. ಅದನ್ನೆಲ್ಲ ಕೇಳಿ, ಭದ್ರಣ್ಣ ಸ್ವಲ್ಪ ಹೊತ್ತು ಆಲೋಚನೆ ಮಾಡಿ. " ಹಾಗಾದರೆ ಒಂದು ಮಾಡು. ನೀನು ಆ ಮನೆಯನ್ನು ಖಾಲೀ ಮಾಡಿ, ಊರಿಗೆ ದೂರವಾಗಿ, ಯಾರೂ ಬಾಡಿಗೆಗೆ ಬಾರದಿರುವ ನಮ್ಮ ಅಜ್ಜನ ಮನೆಯನ್ನು ಸೇರಿಕೋ. ನಾನು ಏರ್ಪಾಡು ಮಾಡಿಸುತ್ತೇನೆ " ಎಂದು ಹೇಳಿ ಅದರಿಂದಾಗುವ ಲಾಭವನ್ನು ಕುರಿತು ಹೇಳಿದನು.

ಮಾರಣೇದಿನ ನಾರಾಯಣನು, ಮನೆಯ ಯಜಮಾನನು ಮನೆಯನ್ನು ಖಾಲೀ ಮಾಡಲು ಹೇಳಿದ್ದಾನೆಂದು ಹೇಳಿ, ಭದ್ರಣ್ಣನ ಅಜ್ಜನ ಮನೆಗೆ ಎಲ್ಲಾ ಸಾಮಾನುಗಳನ್ನೂ ಸಾಗಿಸಿ ಬಿಟ್ಟನು. ನಾರಾಯಣನ ಸಂಸಾರ ಅಲ್ಲಿ ಸೇರಿ, ಹೊಗೆ ಎಬ್ಬಿಸ ತೊಡಗಿತು. ಆ ಮನೆಯಲ್ಲಿ ಬಾವಿ ಇರಲಿಲ್ಲ. ಸ್ವಲ್ಪ ದೂರದ ಬಾವಿಯಿಂದ ನೀರು ತಂದುಕೊಳ್ಳಬೇಕಾಗಿತ್ತು.

ನೆರೆ ಹೊರೆಗಳಾವುದೂ ಇಲ್ಲದ್ದರಿಂದ ಹರಟೆ ಹೊಡೆಯಬು ಅಮ್ಮ ಅಕ್ಕಗಳಾರೂ ಇಲ್ಲದೆ ನಾರಾಯಣನ ಅತ್ತೆಗೆ ಹುಚ್ಚು ಹಿಡಿಯುವ ಹಾಗಾಯಿತು. " ಕೇಳುವವರಿಲ್ಲದ ಈ ಕಾಡಿನಲ್ಲಿ ಹೇಗೆ ಇರುವುದಮ್ಮಾ " ಎಂದು ಗೋಗರೆಯ ತೊಡಗಿದಳು ಮಗಳು. ರುಕ್ಮಿಣಿ, ತಾಯಿಯಿಂದಲೂ ತಂಗಿಯಿಂದಲೂ ಅದೂ ಇದೂ ಕೆಲಸಮಾಡಿಸಲಿಕ್ಕೂ ತೊಡಗಿದಳು.

ನಾರಾಯಣನು ಭದ್ರಣ್ಣನನ್ನು ನೋಡಿ, "ಮಿತ್ರಾ, ನಿನ್ನ ಉಪಾಯವು ಚೆನ್ನಾಗಿದೆ. ಮನೆ ಖರ್ಚು ಕಡಿಮೆಯಾಗಿದೆ " ಎಂದು ಮೆಚ್ಚು ನುಡಿದನು.

" ಆಗಲೇ ಹೋಗಳಲಿಕ್ಕೇನಾಗಿದೆ ? ಇನ್ನೂ ನೋಡು. ಇವತ್ತು ಸಂಜೆಗೆ ನಿನ್ನ ಮನೆಗೆ ಬರುತ್ತೇನೆ. ನನ್ನನ್ನು ವೈದ್ಯನೆಂದು ಹೇಳು " ಎಂದನು ಭದ್ರಯ್ಯ.

ಆ ದಿನ ಸಾಯಂಕಾಲ ನಾರಾಯಣನು ಭದ್ರಯ್ಯನನ್ನು ಮನೆಗೆ ಕರೆದುಕೊಂಡು ಹೋದನು. ಭದ್ರಯ್ಯ ವೈದ್ಯನ ಹಾಗೆ ಅತ್ತೆಯ ಕೈ, ಕಣ್ಣು, ನಾಲಗೆ



ಮುಂತಾದುವನ್ನು ಪರೀಕ್ಷಿಸುವ ಹಾಗೆ ನಟಿಸಿ, "ಇದು ನಿಮ್ಮ ಂಥವರಿಗೆ ಬರತಕ್ಕ ರೋಗವಲ್ಲಮ್ಮಾ. ಒಂದು ನರ ಪೂರ್ತಿಸ್ತಬ್ಧವಾಗಿ ಹೋಗಿದೆ. ಹಾಗೆಂದು ಹೆದರ ಬೇಕಾಗಿ ಏನೂ ಇಲ್ಲ. ಇದಕ್ಕೆ ಔಷಧವೇನೂ ಇಲ್ಲ. ಈಗಲೇ ಜಾಗ್ರುತೆಯಾಗಿರಬೇಕಾದ್ದು ಮುಖ್ಯ. ಉಪ್ಪು ಖಾರ ಮುಟ್ಟಬಾರದು. ಬರೀ ಸೊಪ್ಪಿನಪಲ್ಯ ದೊಂದಿಗೆ, ಮುಷ್ಟಿ ಅಂದರೆ ಒಂದೇ ಮುಷ್ಟಿ ಅನ್ನ ವನ್ನು ಕಲಸಿ ದಿನಾ ಎರಡು ಹೊತ್ತು ಮಾತ್ರ ತೆಗೆದುಕೊಳ್ಳಿ. ಹೀಗೆ ಮೂರು ತಿಂಗಳು ಇರಬೇಕು, ಇದರಲ್ಲಿ ತಪ್ಪಿದರೆ ಮತ್ತೆ ಪ್ರಾಣಕ್ಕೇ ಮುಪ್ಪು ಹೊರತು ಔಷಧಗಿವುಷದ ಏನೂ ಇಲ್ಲ" ಎಂದನು.

ಈ ಮಾತನ್ನು ಕೇಳಿದ ಕೂಡಲೇ ನಾರಾಯಣನ ಅತ್ತೆ ನಿಜಕ್ಕೂ ನೀರಸಳಾಗಿ ನಿಸ್ತೇಜಳಾದಳು. ಆಮೇಲೆ ಭದ್ರಣ್ಣ ಅತ್ತೆಯ ಮಗಳನ್ನು ನೋಡಿ "ನೋಡಮ್ಮಾ, ಈ ವಯಸ್ಸಿನಲ್ಲಿಯೇ ಇಂಥ ಶರೀರ ಭಾರ ಒಳ್ಳೆಯದಲ್ಲ. ಇದರಿಂದ ಹೃದಯ ಸ್ತಂಭನ ಸಂಭವಿಸುವ ಭಯವಿದೆ. ದಿನಾ ಈ ಹುಡುಗಿ ಎರಡು ಮೈಲಿನಷ್ಟು ಓಡಲು ಪಳಗಲಿ. ಒಂದು ತಿಂಗಳು ಅನ್ನವನ್ನು ಬಿಟ್ಟು ರೊಟ್ಟಿಯನ್ನು ಸಾರಿಗೆ ಮುಳುಗಿಸಿ ತಿನ್ನಲಿ. ಆಗ ಮೈ ಹದಕ್ಕೆ ಬರದಿದ್ದರೆ ಮತ್ತೆ ಕೇಳಿ" ಎಂದು ಹೇಳಿ ಅನುಜ್ಞೆ ಪಡೆದು ಅಲ್ಲಿಂದ ಹೊರಟುಹೋದನು.

ಭದ್ರಣ್ಣನ ಚಿಕಿತ್ಸೆ ನಾಲ್ಕಾರು ದಿನ ಸಾಗಲು, ಹುಡುಗಿ ತಾಯಿಯೊಂದಿಗೆ "ಅಮ್ಮಾ, ಸಾಕು. ಊರಿಗೆ ಹೋಗಿಬಿಡೋಣ. ಇಲ್ಲಿ ಇದ್ದರೆ ಮದುವೆ ಆಗಲಿ ಹೋಗಲಿ, ನನ್ನ ಪ್ರಾಣ ಹೋಗುವುದಂತೂ ಖಂಡಿತ" ಎಂದು ಕಣ್ಣೀರು ತುಂಬಿಕೊಂಡಳು.

"ನನ್ನ ಸಂಗತಿ ಮಾತ್ರ ನಿನಗಿಂತ ಒಳ್ಳೆಯದಾಗಿದೆ ಎಂದುಕೊಂಡೆಯಾ?" ಎಂದು ಅತ್ತೆಯೂ ಕಣ್ಣೀರು ಒತ್ತಿಕೊಂಡಳು.

ಆ ಮಾತುಗಳನ್ನು ಕೇಳುತ್ತಿದ್ದ ನಾರಾಯಣ, "ಅದೇನು ಆಗಲೇ ಹೊರಟು ಹೋಗುವಿರಾ? ಮಾವಯ್ಯ ನನ್ನ ಮೇಲೆ ಹಾಕಿದ ಬಾಧ್ಯತೆಗಳ ಮಾತಿಗೆ ಏನು ಮಾಡೋಣ?" ಎಂದನು.

ಅತ್ತೆ ಬೇಸರದಿಂದ "ನಿನಗೇನಾದರೂ ಬುದ್ಧಿ ಕೆಟ್ಟಿತೇನು? ಮಗಳ ಮದುವೆಯೂ ಹೆಂಡತಿಯ ಚಿಕಿತ್ಸೆಯೂ ಮಾವಯ್ಯನದೇ ಭಾರ. ಆ ಬಾಧ್ಯತೆ ಗಳನ್ನು ನಿನಗೆ ಬದಲಾಯಿಸಿದರೆ ತಾಳಿಕೊಳ್ಳುವ ಮೂಢಾತ್ಮ ನೀನು" ಎಂದು ಹೇಳಿ ಆಗಿಂದಾಗಲೇ ಬಾಡಿಗೆಗೆ ಗಾಡಿ ಹಿಡಿದು ತನ್ನ ಮಗಳ ಜೊತೆಯಲ್ಲಿ ತನ್ನ ಊರಿಗೆ ಹೊರಟು ಹೋದಳು.

ಮರುದಿನವೇ ನಾರಾಯಣನು ತನಗೆಲ್ಲಾ ಸೌಕರ್ಯಗಳೂ ಕೂಡಿರುವ ತನ್ನ ಮೊದಲಿನ ಬಾಡಿಗೆಯ ಮನೆಗೆ ಹೋಗಿ ಸಂಸಾರ ಹೂಡಿದನು.





# ಮಂತ್ರ ಮಹಿಮೆ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಆಳಿಕೊಂಡಿದ್ದ ಕಾಲದಲ್ಲಿ, ಒಂದುಸಾರಿ ಬೋಧಿಸತ್ವನು, ಒಂದು ಗ್ರಾಮದಲ್ಲಿ ಚಮ್ಮಾರಕುಲದಲ್ಲಿ ಅವತರಿಸಿ, ಚಮ್ಮಾರ ವೃತ್ತಿಯನ್ನು ನಿರ್ವಹಿಸಿಕೊಂಡಿದ್ದನು, ಒಂದುಸಾರಿ ಅವನ ಒಳ್ಳೆಯ ಗುಣಕ್ಕೆ ಮೆಚ್ಚಿದ ಸಿದ್ಧಪುರುಷನೊಬ್ಬನು ಅವನಿಗೊಂದು ಅಪೂರ್ವ ಮಂತ್ರವನ್ನು ಕಲಿಸಿಕೊಟ್ಟನು.

ಆ ಮಂತ್ರದ ಮಹಿಮೆಯಿಂದ ಬೋಧಿಸತ್ವನು ಕಾಲವಲ್ಲದ ಕಾಲದಲ್ಲಿ ಕೂಡಾ ಮಾವಿನ ಮರಗಳಲ್ಲಿ ಕಾಯಿಗಳನ್ನು ಬರಿಸುತ್ತಿದ್ದನು. ಅವನು ದಿನಾ ಬೆಳಿಗ್ಗೆ ದೋಟಿಯನ್ನು ಹೆಗಲಿಗಾನಿಸಿಕೊಂಡು ಕಾಡಿನಲ್ಲಿರುವ ಮಾವಿನ ಮರಗಳ ಪ್ರಾಂತಕ್ಕೆ ಹೋಗುವನು.

ಅವುಗಳಲ್ಲಿ ಒಂದು ಮಾವಿನ ಮರಕ್ಕೆ ಏಳು ಅಡಿ ದೂರದಲ್ಲಿ ನಿಂತು ಮಂತ್ರವನ್ನು ಉಚ್ಚರಿಸುವನು. ಆಮೇಲೆ ಮಾವಿನ ಮರದ ಕೊಂಬೆಗಳ ಮೇಲೆ ಮಂತ್ರ ಜಲವನ್ನು ಚಿಮುಕಿಸುವನು. ಆ ಕೂಡಲೇ ಮಾವಿನ ಮರದಲ್ಲಿ ಹೊಸ ಎಲೆಗಳು ಚಿಗುರಿ, ಹೂಬಿಟ್ಟು ಮಿಡಿಗಳು ಕಂಡು ಅವು ಕೂಡಲೇ ಬೆಳೆದ ಕಾಯಿಗಳಾಗಿ ಕಂಗೊಳಿಸುವುವು. ಅವುಗಳನ್ನು ಕೊಯ್ದುಕೊಂಡು ಹೋಗಿ ಮಾರಾಟಮಾಡುವನು.

ಒಂದುದಿನ ಆವನು ಮಾವಿನ ಮರದಲ್ಲಿ ಕಾಯಿಗಳನ್ನು ಹುಟ್ಟಿಸುತ್ತಿರುವಾಗ, ಇನ್ನೊಬ್ಬನು ಅವನನ್ನು ನೋಡಿದನು. ಅವನು ದರ್ಭೆಗಳ ಸಂಗ್ರಹಕ್ಕಾಗಿ ಬಂದ ಬ್ರಾಹ್ಮಣತರುಣ. ಅಲ್ಲಿಗೆ ಸಮೀಪದಲ್ಲಿರುವ ಅಗ್ರಹಾರವು ಅವನ ವಾಸಸ್ಥಳವಾಗಿತ್ತು. ಅವನಿಗೆ ಓದುಬರೆಹಗಳೇನೂ ಬಾರವು. ಆದರೆ ಯಾವ ದೇವರದಯದಿಂದಾದರೂ ಕ್ಷಣಮಾತ್ರದಲ್ಲಿ ಪಂಡಿತನಾಗಿ, ಹೋಗಬೇಕೆಂದೂ, ಮನೆ ತುಂಬಾ ಬೆಳ್ಳಿ ಬಂಗಾರಗಳನ್ನು ತುಂಬಿಸಬೇಕೆಂದೂ ಕನಸು ಕಾಣುವವನು. ಇಂತಹ ಮಹತ್ವಾಕಾಂಕ್ಷಿಯಾದ ಅವನ ಹೆಸರು ಸುನಂದ.

ಅವನು ಬೋಧಿಸತ್ವನ ಮಂತ್ರದ ಮಹತ್ವವನ್ನು ನೋಡಿತಲೆದೂಗಿ, ಹತ್ತಿರಬಂದು ನಮಸ್ಕರಿಸಿ ತನ್ನನ್ನು ಶಿಷ್ಯನಾಗಿರಿಸಿಕೊಳ್ಳ ಬೇಕೆಂದು ಬೋಧಿಸತ್ವನನ್ನು ಕೇಳಿದನು. ಬೋಧಿಸತ್ವನು ತಾನು ಯಾರು ಏನೆಂಬುದನ್ನು ಅವನಿಗೆ ತಿಳಿಸಿ "ನನ್ನಲ್ಲಿ ಯಾವ ಗುರುತ್ವವೂ ಇಲ್ಲ" ಎಂದು ಹೇಳಿ ತನ್ನ ಪಾಡಿಗೆ



ಮನೆಗೆ ಹೊರಟನು. ಸುನಂದನು ಅವನ ಹಿಂದೆಯೇ ಹೋಗಿ ಮನೆಯ ಅಂಗಳದಲ್ಲಿ ದೋಟಿಯನ್ನೂ, ಮಾವಿನಕಾಯಿ ಮೂಟೆಯನ್ನೂ ತಾನು ಪಡೆದು ಮನೆಯೊಳಗೆ ಒಯ್ದು ಒಂದು ಬದಿಯಲ್ಲಿಟ್ಟನು. ಮನೆಗೆಲಸಗಳನ್ನೆಲ್ಲಾ ತಾನೇ ಮಾಡುತ್ತೇನೆಂದು ಹೇಳಿ ಸುನಂದನು ಬೋಧಿಸತ್ವನ ಮನೆಯಲ್ಲೇ ಉಳಿದನು. ಬೇಸರವಿಲ್ಲದೆ ಎಲ್ಲಾ ಕೆಲಸಗಳನ್ನೂ ಮಾಡಿಕೊಂಡಿದ್ದನು ಸುನಂದ. ಅವನ ಆಸೆ ಮನಸ್ಸಿನೊಳಗೇ ಅಡಗಿಕೊಂಡಿತ್ತು.

ಹೀಗೆ ಕೆಲವು ದಿನಗಳು ಕಳೆದ ಮೇಲೆ ಒಂದು ದಿನ ಬೋಧಿಸತ್ವನು ತನ್ನ ಹೆಂಡತಿಯೊಂದಿಗೆ, "ಈ ಹುಡುಗ ನಮ್ಮನ್ನು ಏಕೆ ಆಶ್ರಯಿಸಿದ್ದಾನೆ ಗೊತ್ತೆ? ಅವನಿಗೆ ಅಕಾಲದಲ್ಲಿ ಮಾವಿನ ಹಣ್ಣು ಸೃಷ್ಟಿಮಾಡುವ ಮಂತ್ರ ಕಲಿಯಬೇಕೆಂದು ಆಶೆ. ಇದು ಅವನದು ಕೇವಲವಾದ ದುರಾಶೆ. ನಾನು ದಯದೋರಿ ಅವನಿಗೆ ಆ ಮಂತ್ರವನ್ನು ಕಲಿಸಿದರೂ ಸಹ ಅದರಿಂದ ಅವನಿಗೇನೂ ಒಳಿತಾಗದು. ಏಕೆಂದರೆ ಅವನ ಗುಣ ಅಂತಹದು." ಎಂದನು.

ಸುನಂದನು ಸ್ವಲ್ಪವೂ ಬೇಸರವಿಲ್ಲದೆ ಮನೆಯೊಳಗಿನ ಎಲ್ಲಾ ಕೆಲಸಗಳನ್ನೂ ಮಾಡುವುದನ್ನು ನೋಡಿ ಬೋಧಿಸತ್ವನ ಹೆಂಡತಿಗೆ ಅವನ ಮೇಲೆ ತುಂಬಾ ಕನಿಕರ ಮೂಡಿತು. ಅಂತಲೇ ಅವಳು ಗಂಡನೊಂದಿಗೆ, "ಈ ಹುಡುಗ ನಮ್ಮ ಮನೆಯಲ್ಲಿ ಎಂಥಾ ಕೆಲಸವನ್ನಾದರೂ ಮಾಡುತ್ತ ನಮ್ಮ ಮಗನಿಗಿಂತ ಹೆಚ್ಚಿನವನ ಹಾಗಿದ್ದಾನೆ. ಇಂಥವನಿಗೆ ಮಂತ್ರದ ಉಪಯೋಗವಾಗದಿದ್ದೀತೆ? ಒಂದು ವೇಳೆ ಹಾಗೇನಾದರೂ ಆದರೆ ಅದು ಅವನದೇ ದೋಷವಾಗುತ್ತದೆ. ನೀವು ಅವನಿಗೆ ಮಂತ್ರವನ್ನು ಉಪದೇಶಮಾಡಿಬಿಡಿರಿ. ಇಲ್ಲದ್ದೆಲ್ಲ ಏಕೆ ಯೋಚಿಸುವಿರಿ?" ಎಂದಳು.

ಬೋಧಿಸತ್ವನು ಸ್ವಲ್ಪ ಆಲೋಚನೆ ಮಾಡಿ, ಹೆಂಡತಿಯ ಮಾತಿನ ಇಂಗಿತವನ್ನು ಅರಿತುಕೊಂಡು, ಸುನಂದನಿಗೆ ಆ ಮಂತ್ರವನ್ನು ಉಪದೇಶಿಸಲು ಸಿದ್ಧನಾದನು.

ಮಾರಣೇ ದಿನ ಬೋಧಿಸತ್ವನು ಸುಂದನನ್ನು ಕರೆದು, "ಅಪ್ಪಾ, ನಿನಗೆ ನನ್ನ ಅಪೂರ್ವ ಮಂತ್ರವನ್ನು ಕಲಿಯಬೇಕೆಂದಿದೆ ಹೌದಾ? ನೀನು ಅದನ್ನು ಕಲಿತು ನ್ಯಾಯದ ದಾರಿಯಲ್ಲೇ ಉಪಯೋಗಿಸಿಕೊಂಡೆಯಾದರೆ ಧನವೂ ಕೀರ್ತಿಯೂ ಲಭಿಸುತ್ತವೆ. ಆದರೆ ಮುಖ್ಯ ಸಂಗತಿ ಗಮನದಲ್ಲಿಡು. ಇದನ್ನು ನೀನು ಯಾರಿಂದ ಕಲಿತುಕೊಂಡೆ ಎಂದು ಯಾರಾದರೂ ಪ್ರಶ್ನೆ ಮಾಡಿದರೆ ಆ ಗುಟ್ಟನ್ನು ಹೇಳಲೇ ಕೂಡದು. ಅಪ್ಪಿತಪ್ಪಿ ಹೇಳಿದೆಯಾದರೆ, ಆ ಕ್ಷಣದಿಂದ ಮಂತ್ರದ ಮಹಿಮೆ ಅಂತರಿಸಿ ಹೋಗುತ್ತದೆ! ಅಂದರೆ ಅದು ನಿನ್ನ ನೆನಪಿನಲ್ಲೇ ಇರದು" ಎಂದು ಎಚ್ಚರಿಸಿದ ಮೇಲೆ, ಆ ಮಂತ್ರವನ್ನು ಅವನಿಗೆ ಉಪದೇಶ ಮಾಡಿದನು.

ಸುನಂದನು ಮಂತ್ರವನ್ನು ಕಲಿತುಕೊಂಡು ಅಪ್ಪಣೆ ಪಡೆದು ತನ್ನ ಮನೆಗೆ ಹೊರಟು ಹೋದನು. ಅನಂತರ ಅವನು ಮಂತ್ರದ ಮಹಿಮೆಯಿಂದ ಅಕಾಲದಲ್ಲಿ ಮಾವಿನ ಹಣ್ಣುಗಳನ್ನು ಸೃಷ್ಟಿಸುತ್ತ, ಅವುಗಳನ್ನು ಮಾರಿ ಧನ ಸಂಪಾದನೆ ಮಾಡಿ ಸಂತೋಷವಾಗಿದ್ದನು.

ಸುನಂದನು ಸೃಷ್ಟಿಸುವ ಅಕಾಲದ ಮಾವಿನ ಹಣ್ಣುಗಳಲ್ಲೊಂದು, ಕಾಶೀರಾಜನಿಗೆ ಸೇರಿತು. ಅದನ್ನು ನೋಡಿ ಅವನು ಸಂತೋಷಪಟ್ಟು, ಇವುಗಳನ್ನು ಸೃಷ್ಟಿಸುವವರು ಯಾರೆಂಬುದನ್ನು ವಿಚಾರಿಸಿ ಸುನಂದನೆಂದು ತಿಳಿದ ಕೂಡಲೇ, ಅವನನ್ನು ತನ್ನ ಬಳಿಗೆ ಕರೆಯಿಸಿದನು.

“ಏನೋಯ್, ಸುನಂದಾ, ಈ ಋತುವಿನಲ್ಲಿ ಮಾವಿನ ಹಣ್ಣುಗಳನ್ನು ಎಲ್ಲಿಂದ ತರಿಸುತ್ತೀ? ಇವು ದೈವ ಸೃಷ್ಟಿಯಾ? ಮಾನವ ಸೃಷ್ಟಿಯಾ? ಮುಚ್ಚಿಡದೆ ನಿಜ ಹೇಳು” ಎಂದು ಕೇಳಿದನು ರಾಜ. ಸುನಂದನು ಆನಂದದ ಹೆಮ್ಮೆಯಿಂದ, “ಮಾನವ ಸೃಷ್ಟಿಯೇ ಮಹಾರಾಜರೇ. ನಾನು ವಿಕ್ರಯಿಸುವ ಈ ಮಾವಿನ ಹಣ್ಣುಗಳನ್ನೆಲ್ಲಾ ನಾನೇ ಸೃಷ್ಟಿ ಮಾಡಿದ್ದೇನೆ. ನನಗೆ ಒಂಧು ಮಹಾಮಂತ್ರವು ಗೊತ್ತಿದೆ. ಅದರ ಮಹಿಮೆಯಿಂದಲೇ ನಾನು ಅಕಾಲದಲ್ಲಿ ಮಾವಿನ ಮರಗಳಲ್ಲಿ ಕಾಯಿಗಳನ್ನು ಹುಟ್ಟಿಸುತ್ತೇನೆ” ಎಂದನು.

ಅವನ ಮಾತು ಕೇಳಿ ರಾಜನು ಮತ್ತಷ್ಟು ಆಶ್ಚರ್ಯಪಟ್ಟು. “ಹಾಗೇನು? ಆ ಮಂತ್ರದ ಮಹಿಮೆಯನ್ನು ಸ್ವತಃನೋಡಬೇಕು! ನನ್ನ ಉದ್ಯಾನದಲ್ಲಿರುವ ಮಾವಿನ ಮರಗಳಿಗೆ ನಿನ್ನ ಮಂತ್ರದ ಮಹಿಮೆ ಕೊಡು. ಕಾಯಿಗಳು ಬರುತ್ತವೋ ನೋಡೋಣ” ಎಂದನು.

ಸುನಂದನು ಸಂತೋಷದಿಂದ ಇದಕ್ಕೆ ಒಪ್ಪಿದನು. ಮರುದಿನ ರಾಜನು ತನ್ನ ಪರಿವಾರದೊಂದಿಗೆ ಉದ್ಯಾನದೊಳಗೆ ಹೋದನು. ಅಲ್ಲಿ ಒಂದು ಮಾವಿನ ಮರಕ್ಕೆ ಏಳು ಅಡಿ ದೂರದಲ್ಲಿ ನಿಂತು ಸುನಂದನು ಮಂತ್ರವನ್ನು ಪಠಿಸಿ, ಕಮಂಡಲುವಿನ



ನೀರು ತೆಗೆದುಕೊಂಡು ಮರದ ಕೊಂಬೆಗಳಿಗೆ ಹಾರಿಸಿದನು. ನೋಡ ನೋಡುತ್ತಿರಲು, ಹೂಗಳ ಚಿಗುರುಗಳೆಲ್ಲವು ಮಿಡಿಗಳಾಗಿ ದೊಡ್ಡ ದೊಡ್ಡ ಕಾಯಿಗಳಾಗಿ ಬೆಳೆದುವು! ಬೆಳೆದ ಕಾಯಿಗಳು ಹಣ್ಣಾಗಿ ಉದುರಲಿರಲು, ರಾಜನು ಅವುಗಳನ್ನು ಕೊಯ್ಯಿಸಿದನು.

ಈ ಅದ್ಭುತವನ್ನು ನೋಡಿ ರಾಜನೂ, ಅವನೊಂದಿಗಿದ್ದ ಪರಿವಾರದವರೂ ಅತ್ಯಾಶ್ಚರ್ಯ ಪಟ್ಟರು. ಅವರು ಹಣ್ಣುಗಳನ್ನು ತಿಂದು ಕೂಡಾ ನೋಡಿದರು. ಅದರ ಅದ್ಭುತ ರುಚಿಯಿಂದ ಸಂತುಷ್ಟನಾದ ರಾಜನು ಸುನಂದನನ್ನು ತುಂಬಾ ಪ್ರಶಂಸಿಸಿ, ಸನ್ಮಾನ ಮಾಡಿದನು.

ಆಮೇಲೆ ರಾಜನು ಸುನಂದನೊಂದಿಗೆ, "ಇಂತಹ ಮಹಾಮಂತ್ರವನ್ನು ನಿನಗೆ ಉಪದೇಶ ಮಾಡಿದ ಮಹಾಜ್ಞಾನಿ ಯಾರು?" ಎಂದು ಪ್ರಶ್ನಿಸಿದನು.

ಸುನಂದನಿಗೆ ಏನು ಹೇಳಬೇಕೆಂದು ತೋರಲಿಲ್ಲ. ನಿಜವನ್ನೇ ಹೇಳಿದರೆ ಮಂತ್ರದ ಫಲವು ನಶಿಸುತ್ತ ದೆಂದು ಗುರುಗಳು ಹೇಳಿದ ಮಾತು ಅವನ ನೆನಪಿನಲ್ಲಿತ್ತು. ಆದರೂ ಕಂಠಪಾಠವಾಗಿರುವ ಆ ಮಂತ್ರವು ಮರೆತು ಹೋಗುವುದೆಂದರೇನು? ಗುರುಗಳು ಸುಮ್ಮನೆ ದಭಾಯಿಸಿ ಹೇಳಿದ್ದು, ಅಷ್ಟೇ! ಹೀಗೆಂದುಕೊಂಡು, ತಾನು ಮಂತ್ರವನ್ನು ಯಾರ ಹತ್ತಿರ ಕಲಿತೆನೆಂಬುದನ್ನು ಮುಚ್ಚುಮರೆಯಿಲ್ಲದೆ ಹೇಳಿಬಿಟ್ಟನು. ಅದನ್ನು ಕೇಳಿ ರಾಜನು ಅವಹೇಳನ ಮಾಡಿ ನಗುತ್ತ, "ಇಂತಹ ಮಹತ್ವವಾದ ಮಂತ್ರವನ್ನು ನೀನು ಚರ್ಮಕಾರನ ಹತ್ತಿರ ಸೇವೆ ಮಾಡಿ ಕಲಿತೆಯಾ? ಬ್ರಾಹ್ಮಣನಾದ ನೀನು ಇಹಲೋಕದ ಸೌಖ್ಯಗಳಿಗಾಗಿ ಸ್ವಧರ್ಮವನ್ನು ಮಣ್ಣುಪಾಲು ಮಾಡಿದೆಯಾ? ಮಹಾನೀಚನು ನೀನು!" ಎಂದು ನಿಂದಿಸಿದನು.

ಸುನಂದನು ತಲೆ ಬಗ್ಗಿಸಿಕೊಂಡೇ ಅಲ್ಲಿಂದ ತನ್ನ ಮನೆಗೆ ಹೋಗಿ, ನಾಚಿಗೆಯಿಂದ ಮುದುಡಿಕೊಂಡಿದ್ದನು. ಸ್ವಲ್ಪ ಕಾಲದ ಮೇಲೆ ಕಾಶೀರಾಜನಿಗೆ ಮಾವಿನ ಹಣ್ಣಿನ ಕೋರಿಕೆಯುಂಟಾಯಿತು. ಸುನಂದನನ್ನು ಕರೆಯಿಸಿ ಮಠದಲ್ಲಿ ಮಾವಿನ ಹಣ್ಣು ಸೃಷ್ಟಿಸಲು ಹೇಳಿದನು.

ಸುನಂದನು ಮಾವಿನ ಮರಕ್ಕೆ ದೂರದಲ್ಲಿ ನಿಂತುಕೊಂಡು ಮಂತ್ರವನ್ನು ನೆನೆಸಿ ನೋಡಿದನು. ಎಷ್ಟು ನೆನೆಸಿದರೂ ಮಂತ್ರವು ನೆನಪಿಗೆ ಬರಲಿಲ್ಲ. ಗುರುವಾಜ್ಞೆ ತಪ್ಪಿದುದರಿಂದಲೇ ಹೀಗಾಯಿತೆಂದು ರಾಜನ ಮುಂದೆ ಅಡ್ಡಬಿದ್ದು, ತಾನು ಗುರುವಿನ ಆಜ್ಞೆಯನ್ನು ಧಿಕ್ಕರಿಸಿದುದರಿಂದ ಮಂತ್ರವೇ ಮರೆತು ಹೋಯಿತೆಂದು ಹೇಳಿಕೊಂಡನು. ಕೋಪದಿಂದ ಅವನನ್ನು ಹೊರಗೆ ದೂಡಿಸಿಬಿಟ್ಟನು ರಾಜ.





# ಭರ್ತೃಹರಿಯ ಕಥೆ

ಕ್ರಿ. ಶ. ಏಳನೆಯ ಶತಮಾನದಲ್ಲಿ ಭರ್ತೃಹರಿ ಎಂಬ ರಾಜನು ಉಜ್ಜಯಿನಿಯ ರಾಜಧಾನಿಯಲ್ಲಿ ದೇಶವನ್ನಾಳಿಕೊಂಡಿದ್ದನು. ಅವನು ಒಳ್ಳೆಯ ವಿಲಾಸ ಜೀವಿಯಾಗಿದ್ದರೂ ಪರಿಪಾಲನೆಯ ವಿಷಯದಲ್ಲಿ ತುಂಬಾ ಭೂತದಯೆವುಳ್ಳವನು.

ನಗರದಾಚೆಗಿರುವ ಅರಣ್ಯದಲ್ಲಿ ಒಬ್ಬ ಮುನಿ ವಾಸವಾಗಿದ್ದನು. ಒಂದು ದಿನ ಆ ಮುನಿಗೆ ವಿಚಿತ್ರ ಫಲವೊಂದು ಕಂಡಿತು. ಆಲೋಚಿಸುವಾಗ ಆ ಫಲವು ತನ್ನ ಧ್ಯಾನ ಶಕ್ತಿಯ ಫಲಿತವೆಂದು ಅವನಿಗೆ ತಿಳಿಯಿತು.





ಆ ವಿಚಿತ್ರ ಫಲವು ಅದ್ಭುತ ಶಕ್ತಿಯುಳ್ಳದ್ದು. ಅದನ್ನು ತಿಂದವನು ನೂರು ವರ್ಷಗಳವರೆಗೆ ಯೌವನವಂತನಾಗಿರುತ್ತಾನೆ. ಈ ಫಲವನ್ನು ತಿನ್ನಲು ರಾಜಾ ಭರ್ತೃಹರಿಯೇ ಅರ್ಹನೆಂದು ಭಾವಿಸಿ, ಮುನಿ ಆ ಫಲವನ್ನು ಭರ್ತೃಹರಿಗೆ ಬಹುಮಾನ ಕೊಟ್ಟನು.



ಭರ್ತೃಹರಿಗೆ ತನ್ನ ಚಿಕ್ಕರಾಣಿಯ ಮೇಲೆ ಪ್ರಾಣ ಸಮಾನ ಪ್ರೀತಿಯಾದುದರಿಂದ, ಆ ಹಣ್ಣನ್ನು ಕೊಂಡೊಯ್ದು ಅವಳಿಗೇ ತಿನ್ನಲು ಕೊಟ್ಟನು.

ಮರುದಿನ ಭರ್ತೃಹರಿ ಬೇಟೆಯಾಡಲು ಅರಣ್ಯಕ್ಕೆ ಹೋದನು. ಬೇಟೆಯಿಂದ ಹಿಂದಿರುಗುವಾಗ, ಮುಸುಕು ಧರಿಸಿದ ಸ್ತ್ರೀಯೊಬ್ಬಳು ಅವನ ಇದಿರಿಗೆ ಬಂದು, ತನ್ನೊಂದಿಗೆ ನಿರ್ಜನ ಪ್ರದೇಶಕ್ಕೆ ಬರಬೇಕೆಂದು ಕೇಳಿಕೊಂಡಳು.





ಹಾಗೆ ಹೋದ ರಾಜನಿಗೆ ಅವಳು ಅದ್ಭುತ ಸುಂದರಿಯಾದ ನರ್ತಕಿ ಎಂದು ಗುರುತು ಹತ್ತಿತು. ಅವಳು ಅವನಿಗೆ ಒಂದು ಹಣ್ಣನ್ನು ಕೊಟ್ಟು, "ಈ ಹಣ್ಣು ತನ್ನ ಅಮೋಘ ಶಕ್ತಿಯಿಂದ ನಿಮ್ಮನ್ನು ನೂರು ವರ್ಷ ಯೌವನದಲ್ಲಿರಿಸುತ್ತದೆ. ಇದನ್ನು ತಿನ್ನುವ ಅರ್ಹತೆ ನನಗಲ್ಲ, ನಿಮಗೇ" ಎಂದು ಹೇಳಿ ವೇಗವಾಗಿ ಅಲ್ಲಿಂದ ಹೊರಟು ಹೋದಳು.

ರಾಜನು ಮುನಿಯ ಹತ್ತಿರ ಹೋಗಿ, ಅದ್ಭುತ ಶಕ್ತಿಯ ಇನ್ನೊಂದು ಹಣ್ಣನ್ನು ಯಾರಿಗಾದರೂ ಕೊಟ್ಟಿರಾ ಎಂದು ಕೇಳಿದನು. ಅಂತಹ ಇನ್ನೊಂದು ಹಣ್ಣು ಇಲ್ಲವೇ ಇಲ್ಲವೆಂದು ಮುನಿ ರಾಜನೊಂದಿಗೆ ಹೇಳಿದನು.





ಆ ಮಾತು ಕೇಳಿ ಭರ್ತೃಹರಿಗೆ ಅಪರಿಮಿತ ಆಶ್ಚರ್ಯವಾಯಿತು. ಅವನು ಅಲ್ಲಿದ್ದ ಒಂದು ಗುಡ್ಡದಕಲ್ಲಿನ ಮೇಲೆ ಕುಳಿತುಕೊಂಡು, ಆ ವಿಚಿತ್ರ ಫಲವು ನರ್ತಕಿಗೆ ಹೇಗೆ ಸಿಕ್ಕಿತು ? ಅದರ ಹಿಂದಿನ ನಿಗೂಢ ರಹಸ್ಯವೇನಿದ್ದೀತು ? ಎಂದು ಆಲೋಚಿಸ ತೊಡಗಿದನು.

ತರುವಾಯ ಅವನು ನಗರವನ್ನು ಸೇರಿ ವಿಚಾರಣೆ ಪ್ರಾರಂಭಿಸಿದನು. ಆಗ ಹೊರಬಿದ್ದ ಸಮಾಚಾರವೇನಂದರೆ, ಅವನ ಚಿಕ್ಕರಾಣಿಗೆ ಒಬ್ಬ ರಾಜೋದ್ಯೋಗಿಯ ಮೇಲೆ ಅಪಾರ ಪ್ರೇಮ. ಅವಳು ಗಂಡನು ಕೊಟ್ಟ ಆ ಫಲವನ್ನು ಅವನಿಗೆ ಕೊಟ್ಟಿದ್ದಾಳೆ.





ಆದರೆ ಆ ರಾಜೋದ್ಯೋಗಿ ಅದನ್ನು ತಾನು ತಿನ್ನದೆ, ಆ ದಿನ ಸಾಯಂಕಾಲ ಅದನ್ನು ಆ ನರ್ತಕಿಗೆ ಕೊಟ್ಟಿದ್ದಾನೆ. ಅವನಿಗೆ ಅವಳ ಮೇಲೆ ತುಂಬಾ ಪ್ರೀತಿ.

ವಜ್ರಾಘಾತದಂತಹ ಈ ರಹಸ್ಯವನ್ನು ತಿಳಿದು ಕೊಂಡು ಭರ್ತೃಹರಿ ಕೆಲವು ದಿನ ಚಿಂತೆಯಲ್ಲೇ ಮುಳುಗಿದನು. ಒಂದು ದಿನ ನಡುರಾತ್ರಿಯಲ್ಲಿ ಸಿಂಹಾಸನವನ್ನೂ, ಸುಂದರ ರಾಜಧಾನಿಯನ್ನೂ ಬಿಟ್ಟು ಅರಣ್ಯಕ್ಕೆ ಹೋಗಿ ಮುನಿಯ ಹಾಗೆ ಶೇಷಾಯುಷ್ಯವನ್ನು ಕಳೆದನು ಭರ್ತೃಹರಿ.





ಹೀಗೆ ಸನ್ಯಾಸಿಯಾದ ರಾಜನು ಅನೇಕ ಗ್ರಂಥ ಗಳನ್ನು ಬರೆದನು. ಅವುಗಳಲ್ಲಿ ವೈರಾಗ್ಯ ಶತಕವೆಂಬ ನೂರು ಪದ್ಯಗಳಿರುವ ಗ್ರಂಥವೂ ಒಂದು. ಇದು ಜೀವನದಲ್ಲಿ ಇದಿರಾಗುವ ಪ್ರಲೋಭನ, ಭ್ರಾಂತಿ, ಭೇಷಜಗಳನ್ನೆಲ್ಲ ಎತ್ತಿ ತೋರಿಸಲು ಸಹಾಯಕವಾಗಿ ಅತ್ಯಂತ ಪ್ರಸಿದ್ಧವೆನಿಸಿದೆ.



# ಉದಾಸೀನದ ಶೀನ

ಒಂದು ಊರಿನಲ್ಲಿ ತುಂಗಮ್ಮನೆಂಬವಳ ಗಂಡನು ಎರಡು ಗಂಡು ಮಕ್ಕಳನ್ನು ಬಿಟ್ಟು ತೀರಿ ಹೋದ ಮೇಲೆ ತುಂಗಮ್ಮನೇ ಯಜಮಾನತಿಯಾದಳು. ಹಿರಿಯ ಮಗನಾದ ದಾನಪ್ಪ ತುಂಬ ಚುರುಕಾಗಿದ್ದ. ಸ್ವಲ್ಪವೂ ಉದಾಸೀನವಿಲ್ಲದೆ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ.

ಆದರೆ ಚಿಕ್ಕವನಾದ ಶೀನ ಮಾತ್ರ ತುಂಬಾ ಉದಾಸೀನದವ. ಯಾವ ಕೆಲಸಕ್ಕೂ ಹೋಗಲಾರ. ಅಣ್ಣನು ತಮ್ಮ ತೋಟದ ಕೆಲಸ ಮಾತ್ರವಲ್ಲದೆ, ಇತರರ ಹೊಲಗಳಲ್ಲಿ ಕೂಲಿಗೆ ಕೆಲಸ ಮಾಡುವನು. ಶೀನನಾದರೋ ತನ್ನ ಪಾಡಿಗೆ ಹೊತ್ತು ಹೊತ್ತಿಗೆ ತಿಂದು ತಿರುಗುತ್ತಾ ಇರುವನು.

ಎಷ್ಟು ಹೇಳಿದರೂ ಶೀನನು ತನ್ನ ಉದಾಸೀನತೆ ಬಿಡಲಿಲ್ಲ. ತುಂಗಮ್ಮನಿಗೆ ಬೇಸರ ಬಂದಿತು. ಇರುವ ತೋಟವನ್ನು ಇಬ್ಬರಿಗೂ ಹಂಚಿಕೊಟ್ಟರೆ, ಹೆಗಲಿಗೆ ಭಾರಬಿದ್ದಂತಾಗಿ ಅವನ ಉದಾಸೀನತೆ ಹೋಗಬಹುದೆಂದು ಅವಳಿಗೆ ತೋರಿತು. ಅಂತಲೇ ಇರುವ ತೋಟವನ್ನು ಇಬ್ಬರಿಗೂ ಹಂಚಿಕೊಟ್ಟು ಬಿಟ್ಟಳು. ಇದಾದ ಮೇಲೆ ಶೀನನ ಗುಂಡಿಗೆಗೆ ಕಲ್ಲು ಬಿದ್ದ ಹಾಗಾಯಿತು. ಮೈ ಹಿಡಿದು ಹೋದ ಉದಾಸೀನತೆಯಿಂದ ಅವನಿಗೆ ಏನು ಮಾಡುವು ದೆಂದು ತೋರಲಿಲ್ಲ. ಹಗಲೆಲ್ಲಾ ಅಭ್ಯಾಸದಂತೆ ಊರೊಳಗೆ ತಿರುಗಾಡಿ, ಕತ್ತಲೆಯಾದ ಮೇಲೆ ಊರ ಹೊರಗಿನ ಪಾಳುದೇಗುಲವನ್ನು ಸೇರಿ ಅದರ ಜಗಲಿಯಲ್ಲಿ ಕುಳಿತು ಹೇಗೆ ಬದುಕುವುದಪ್ಪಾ ಎಂದು ಚಿಂತಿಸುತ್ತಾ ಕುಳಿತನು. ಹಾಗೆಯೇ ನಿದ್ದೆ ಬಂದು ಒರಗಿದನು.

ಮಧ್ಯರಾತ್ರಿಯ ಸಮಯದಲ್ಲಿ ಏನೋ ಸಪ್ಪಳಾದುದರಿಂದ ಶೀನನಿಗೆ ಎಚ್ಚರವಾಯಿತು. ಅವನ ಇದಿರಿನಲ್ಲಿ ದೇವತೆಯಂತಹ ಒಬ್ಬಳು ನಿಂತಿದ್ದಳು. ಅವನು ಏನೋ ಹೇಳಲು ಬಾಯಿ ತೆರೆಯುವುದರೊಳಗೆ ಅವಳೇ "ಯಾರಪ್ಪಾ ನೀನು ? ಇಲ್ಲೇಕೆ ಮಲಗಿರುವಿ ? ಬೇರೆ ಒಳ್ಳೆಯ ಜಾಗ ಸಿಗಲಿಲ್ಲವೆ ?" ಎಂದು ಕೇಳಿದಳು.

ಅವಳ ಸ್ವರವು ಭಯಪಡಿಸುವಂತಿರಲಿಲ್ಲವಾದು ದರಿಂದ ಶೀನನು ಧೈರ್ಯ ತಂದುಕೊಂಡು, "ಅಮ್ಮಾ, ನನ್ನ ಹೆಸರು ಶೀನ. ಒಬ್ಬನೇ ಬೇರೆ ಯಾಗಿದ್ದೇನೆ. ಏನೂ ತೋರದೆ ಹೇಗೆ ಬದುಕುವು

ಜಿ. ಆರ್. ಸಾಂಬ

ನೆಂದು ತಿಳಿಯದೆ ಹೀಗೆ ಬಂದು ಬೆಳಗಮಾಡಲು ಸಿಕ್ಕಿದ ಜಾಗದಲ್ಲಿ ಮಲಗಿದ್ದೇನೆ" ಎಂದನು.

ದೇವತೆ ಅವನ ಮೇಲೆ ಕರುಣೆಗೊಂಡು "ಹಾಗೇನು ಪಾಪ! ನೀನು ತಕ್ಕ ಮಟ್ಟಿಗಾದರೂ ಏನು ಕೆಲಸ ಮಾಡುವಿಯೋ ಹೇಳು. ಆ ಕೆಲಸ ದಲ್ಲಿಯೇ ನಿನಗೆ ಒಳಿತಾಗುವ ಹಾಗೆ ಮಾಡುತ್ತೇನೆ" ಎಂದಳು. "ನನಗೆ ಬೇಸಾಯದ ಕೆಲಸ ಹೇಗೆ ಮಾಡ ಬೇಕೆಂದು ಅಲ್ಪ ಸ್ವಲ್ಪ ನೋಡಿ ಗೊತ್ತಿದೆ. ಮತ್ತೇನೂ ಗೊತ್ತಿಲ್ಲ" ಎಂದ ಶೀನ.

"ಸರಿ ಅದನ್ನೇ ಮಾಡು. ಲಾಭ ಬರುವ ಹಾಗೆ ಮಾಡುತ್ತೇನೆ" ಎಂದು ಹೇಳಿ ಆ ದೇವಿ ಅದೃಶ್ಯಳಾದಳು.

"ನನಗಿರುವ ತೋಟ ಏನೂ ಚೆನ್ನಾಗಿಲ್ಲ. ವ್ಯವಸಾಯ ಹೇಗೆ ಮಾಡಲಿ?" ಎಂದು ಶೀನನು ದೇವಿಯೊಡನೆ ಹೇಳ ಬೇಕೆಂದು ನೋಡುವಾಗಲೇ ದೇವಿ ಕಾಣಿಸದೆ ಹೋಗಿದ್ದಳು. ಆದ್ದರಿಂದ ಅವನಿಗೆ ಮತ್ತೆ ಚಿಂತೆಯೇ ಉಳಿಯಿತು.

ಆಮೇಲೆ ನಾಲ್ಕಾರು ದಿನಗಳಲ್ಲಿ ರಾಜನಿಂದ ಗ್ರಾಮಾಧಿಕಾರಿಗಳಿಗೆಲ್ಲಾ ಒಂದು ಆಜ್ಞೆ ಬಂದಿತು. ಆ ಪ್ರಕಾರ ಗ್ರಾಮಾಧಿಕಾರಿ ಹೊಲಗದ್ದೆಗಳಿಲ್ಲದ ದಾನಪ್ಪ ಮತ್ತು ಶೀನರಿಗೆ, ಪಕ್ಕದ ಕಾಡು ಜಾಗದಲ್ಲಿ ಒಬ್ಬೊಬ್ಬರಿಗೆ ಎರಡು ಎಕರೆ ಭೂಮಿ ಯನ್ನು ಕೊಟ್ಟನು. ಅದು ವ್ಯವಸಾಯಕ್ಕೆ ಯೋಗ್ಯವಾದ ನೆಲವಾದರೂ ಕಷ್ಟಪಟ್ಟು ನೆಲವನ್ನು ಹಸನು ಮಾಡಬೇಕಾಗಿತ್ತು.

ಶೀನನ ಪಾಲಿಗೆ ಬಂದ ಭೂಮಿಯಲ್ಲಿ ಪೊದೆ ಬಳ್ಳಿಗಳು ವಿಪರೀತವಾಗಿದ್ದುವು. ದಾನಪ್ಪನ ಪಾಲಿಗೆ ಬಂದ ಭೂಮಿ ಸ್ವಲ್ಪ ಮಟ್ಟಿಗೆ ಒಳ್ಳೆಯದಾಗಿತ್ತು. ಶೀನ ತನ್ನ ನೆಲವನ್ನು ಸಾಗುವಳಿ ಮಾಡಬೇಕಾ ಗಿದ್ದರೆ ಮೊದಲು ಕತ್ತಿ ಕೊಡಲಿ ಹಾರೆಗಳಿಂದ ಪೊದೆ ಬಳ್ಳಿಗಳನ್ನು ಕಡಿದೂ ಎಬ್ಬಿಸಿಯೂ ಕಷ್ಟ ಪಟ್ಟು ತೆಗೆಯ ಬೇಕಾಗಿತ್ತು.

ಈ ಕಾರಣದಿಂದ ಉದಾಸೀನದ ಶೀನ ದಾನಪ್ಪನ ಬಳಿಗೆ ಹೋಗಿ, "ಅಣ್ಣಾ, ನಿನ್ನ ಹಾಗೆ ನಾನು



ಕಷ್ಟಪಡಲು ಸಾಧ್ಯವಿಲ್ಲದವನೆಂದು ನಿನಗೆ ಗೊತ್ತಿದೆ ಯಷ್ಟೆ? ನಿನಗಾದರೋ ಚೆನ್ನಾಗಿ ದುಡಿದು ಅಭ್ಯಾಸವಿದೆ. ನಿನಗೆ ಬಂದ ಭೂಮಿಯಲ್ಲಿ ಪೊದೆ ಬಳ್ಳಿಗಳು ಬಹಳ ಕಡಿಮೆ, ನಮ್ಮ ಸ್ಥಳಗಳನ್ನು ಬದಲಾಯಿಸಿ ಕೊಳ್ಳೋಣ ಅಣ್ಣಾ" ಎಂದನು.

ದಾನಪ್ಪನು ತಮ್ಮನ ಮೇಲಿನ ಮಮತೆಯಲ್ಲಿ ಅವನು ಹೇಳಿದಂತೆಯೇ ಮಾಡಿದನು.

ಶೀನ ತನಗೆ ಬಂದ ಭೂಮಿಯಲ್ಲಿ ಮೆಲ್ಲನೆ ಕಡಿದೂ ಅಗೆದೂ ನೆಲಸರಿ ಮಾಡಿಕೊಂಡಿದ್ದಾಗ, ದಾನಪ್ಪ ತನ್ನ ಜಾಗದ ಪೊದೆ ಬಳ್ಳಿ ಮುಂತಾದ ಬೇಡದವುಗಳನ್ನೆಲ್ಲಾ ಕಡಿದು ಸಾನು ಮಾಡಿದನು. ಆಗ ಒಂದು ಒಣಗಿದ ಮರದ ಪೊಟರೆಯಲ್ಲಿ ಅವನಿಗೆ ಎರಡು ಬಂಗಾರದ ಗಟ್ಟಿಗಳು ಸಿಕ್ಕಿದುವು.

ಆ ಸಮಾಚಾರ ಶೀನನಿಗೆ ಗೊತ್ತಾಯಿತು. ಅವನು ಅಯ್ಯಯ್ಯೋ ಎಂದು ತಲೆ ಚಚ್ಚಿಕೊಳ್ಳುತ್ತಿರಲು ದೇವತೆ ಹೇಳಿದ ಸಂಗತಿ ಅವನ ನೆನಪಿಗೆ ಬಂದಿತು. ಅವನು ಅಣ್ಣನ ಬಳಿಗೆ ಓಡಿ ಹೋಗಿ ದೇವತೆಯ ಸಮಾಚಾರವನ್ನು ಹೇಳಿ ಆ ಬಂಗಾರಗಳನ್ನು ತನಗೆ ಕೊಡುವಂತೆ ಕೇಳಿದನು. ಅದರಲ್ಲಿ ಅರ್ಧಭಾಗ ಕೊಡಲಿಕ್ಕೂ ದಾನಪ್ಪ ಒಪ್ಪಲಿಲ್ಲ.

ನಾಲ್ಕು ದಿನಗಳು ಕಳೆದು ಶೀನ ಅಣ್ಣನ ಬಳಿಗೆ ಹೋಗಿ, "ಅಣ್ಣಾ, ನಿನ್ನ ಜಾಗದ ಪೊದೆ ಬಳ್ಳಿಗಳನ್ನೆಲ್ಲಾ ಕಡಿದು ಸಾಗುವಳಿಗೆ ಸಿದ್ಧಮಾಡಿಯಾಯಿತು. ನನಗೆ ಇನ್ನೊಂದು ಅವಕಾಶ ಕೊಟ್ಟು ಬಿಡು. ಮತ್ತೆ ನಮ್ಮ ಭೂಮಿಗಳನ್ನು ಬದಲಾಯಿಸಿ ಕೊಂಡು ಯಾರದು ಅವರೇ ಇಟ್ಟುಕೊಳ್ಳೋಣ" ಎಂದನು. ತಮ್ಮನ ಮೇಲೆ ಅಭಿಮಾನವಿರುವ ಅಣ್ಣ ದಾನಪ್ಪನ ಮನಸ್ಸು ಕರಗಿದುದರಿಂದ ಅದಕ್ಕೂ ಒಪ್ಪಿದನು.

ಈ ನೆಲದಲ್ಲಿ ದಾನಪ್ಪನು ನೀರು ಹಾಯಿಸಿ ಉಳುತ್ತಿದ್ದಾಗ, ಒಂದು ಕಡೆಯಲ್ಲಿ ನೇಗಿಲಿಗೆ ಬಲವಾಗಿ ಏನೋ ತಗಲಿ ಖಂಗೆಂದಿತು. ಅವನು ಅಲ್ಲಿ ಜಾಗರೂಕತೆಯಿಂದ ಅಗೆದು ನೋಡಿದಾಗ ನಿಧಿಯ ಬಿಂದಿಗೆಗಳು ದೊರಕಿದುವು.



ಈ ಸಮಾಚಾರ ಕೇಳಿದಕೂಡಲೇ ಶೀನನಿಗೆ ಮೂರ್ಛೆಯೇ ಬಂದಿತು. ಅವನು ತನ್ನ ದುರದೃಷ್ಟ ವನ್ನು ನಿಂದಿಸಿಕೊಳ್ಳುತ್ತಾ, ಅಣ್ಣನ ಬಳಿಗೆ ಹೋಗಿ ನಿಧಿ ಬಿಂದಿಗೆಗಳಲ್ಲಿ ಭಾಗಕೊಡುವಂತೆ ಕೇಳಿದನು. ಎಷ್ಟು ಮಾತ್ರಕ್ಕೂ ಕೊಡಲಾರೆನೆಂದು ಖಂಡ ತುಂಡ ವಾಗಿ ಹೇಳಿ ಬಿಟ್ಟನು ದಾನಪ್ಪ.

ಶೀನನು ಹಗಲೆಲ್ಲಾ ಚಿಂತೆಯಿಂದ ಕಾಲು ಒಯ್ಯುತ್ತ ತಿರುಗಿ, ರಾತ್ರಿಯಾದಕೂಡಲೇ ಅದೇ ಪಾಳು ಗುಡಿಗೆ ಹೋಗಿ ಒಂದು ಮೂಲೆಯಲ್ಲಿ ಮಲಗಿದನು. ಮಧ್ಯರಾತ್ರಿಯಲ್ಲಿ ಆ ದೇವತೆ ಬಂದು, ಅವನನ್ನು ಎಬ್ಬಿಸಿದಳು. ಶೀನನ ಸಮಾಚಾರ ತಿಳಿದು ದೇವತೆ ಬಹಳ ಕೋಪಗೊಂಡು, "ಛೀ! ಛೀ! ಉದಾ ಸೀನದ ಮುದ್ದೆ! ನಿನ್ನನ್ನು ಒಳ್ಳೇ ದಾರಿಗೆ ತರೋಣ ವೆಂದು ಎಷ್ಟು ಅವಕಾಶ ಕಲ್ಪಿಸಿದರೂ ನಿನ್ನ ಉದಾಸೀನದಿಂದ ಕಳೆದುಕೊಂಡೆಯಲ್ಲೋ! ರಾಜನ ಮನಸ್ಸಿಗೆ ದಯಾಗುಣ ಬರುವ ಹಾಗೆ ಮಾಡಿ ನಿನಗೆ ಭೂಮಿ ಕೊಡಿಸಿದೆ. ಮರದ ಪೂಟರೆಯಲ್ಲಿ ಬಂಗಾ ರದ ಗಟ್ಟಿಗಳನ್ನಿರಿಸಿದೆ. ಆಮೇಲೆ ನೀನು ಮತ್ತೊಂದು ಸಾರಿ ಬದಲಾಯಿಸಿಕೊಂಡ ನೆಲದಲ್ಲಿ ನಿಧಿಬಿಂದಿಗೆ ಗಳನ್ನು ಅಡಗಿಸಿಟ್ಟೆ. ಎಲ್ಲವನ್ನೂ ನಿನ್ನ ಅಣ್ಣನಿಗೆ ಬಿಟ್ಟು ಕೊಟ್ಟೆ! ಮೂಢಾ! ನಿನ್ನ ಉದಾಸೀನ ಬಿಡುವವರೆಗೂ ನಿನಗೆ ಒಳಿತು ಮಾಡಲು ಯಾರಿಗೂ ಸಾಧ್ಯವಿಲ್ಲ. ಇನ್ನು ನಿನ್ನ ಮೋರೆ ಈ ಕಡೆ ತೋರಿಸ ಬೇಡ!" ಎಂದು ಬೈದು ಅದೃಶ್ಯಳಾದಳು.

ದೇವಿಯು ಮಾತುಗಳನ್ನು ಕೇಳಿದ ಮೇಲೆ ಶೀನನಿಗೆ ತನ್ನ ಮೇಲೆಯೇ ಅಸಹ್ಯಹುಟ್ಟಿತು. ಅವನು ಆಮೇಲೆ ಉದಾಸೀನತೆಯನ್ನು ಹೊಡೆದೋಡಿಸಿ, ತನ್ನ ನೆಲದಲ್ಲಿ ಕಷ್ಟಪಟ್ಟು ಕೆಲಸಮಾಡಿ, ಅಣ್ಣನಿಗೆ ಸಮಾನವಾಗಿ ಪೈರು ತೆಗೆಯಲು ತೊಡಗಿದನು. ಆಗ ಗ್ರಾಮಸ್ಥ ರೆಲ್ಲಾ ಅವನನ್ನು ಮೆಚ್ಚಿಕೊಂಡರು.

ಅವನ ಹೊಲದ ಧಾನ್ಯಗಳು ಮನೆಗೆ ಬಂದು ಬಿದ್ದರಾತ್ರಿ ದಾನಪ್ಪ ಬಂದು, ಶೀನನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, "ತಮ್ಮಾ, ನನಗೆ ಸಿಕ್ಕಿದ ಬಂಗಾರದ ಗಟ್ಟಿಗಳಲ್ಲಿಯೂ ನಿಧಿಯ ಬಿಂದಿಗೆ ಗಳಲ್ಲಿಯೂ ನಿನಗೆ ಭಾಗಕೊಡಲಿಲ್ಲವೆಂದು ಸಿಟ್ಟಾಗ ಬೇಡ. ಅಮ್ಮನೂ ನಾನೂ ಕೂಡಿ ಆಲೋಚಿಸಿಯೇ ನಿನ್ನನ್ನು ಬೇರೆ ಮಾಡಿದೆವು. ಈಗ ನಿನ್ನ ಉದಾಸೀನತೆ ಬಿಟ್ಟು ಹೋಯಿತಪ್ಪೆ? ನಿನಗೆ ಎಲ್ಲದರಲ್ಲಿಯೂ ಅರ್ಧಭಾಗ ಇದೆ. ಮತ್ತೆ ನಾವಿಬ್ಬರೂ ಮೊದಲಿನ ಹಾಗೆ ಒಟ್ಟಿಗೇ ಇರೋಣ, ಅಮ್ಮ ತುಂಬಾ ಸಂತೋಷಪಡುತ್ತಾಳೆ" ಎಂದನು.

ಶೀನನು ಇದಕ್ಕೆ ಬಹಳ ಸಂತೋಷಪಡುತ್ತ ಅಣ್ಣನಿಗೂ ತಾಯಿಗೂ ಸಾಷ್ಟಾಂಗ ನಮಸ್ಕಾರ ಮಾಡಿದನು.



# ನೈತಿಕ ವಿದ್ಯೆ

ಒಂದುಸಾರಿ ಧರ್ಮನಂದನನೆಂಬ ರಾಜನು ಶಿಳ್ಳಂಗೇರಿಯನ್ನು ಆಳುತ್ತಿದ್ದಾಗ, ರಾಜ್ಯದೊಳಗಿನ ಬಾಲಬಾಲಿಕೆಯರಿಗೆ ನೈತಿಕವಿದ್ಯೆಯನ್ನು ಬೋಧಿಸಲು ತಕ್ಕ ಉಪಾಧ್ಯಾಯರನ್ನು ನಿಯಮಿಸಬೇಕೆಂದುಕೊಂಡನು. ಆದರೆ ಇದಕ್ಕೆ ಅರ್ಹರಾದ ಬೋಧಕರನ್ನು ಆರಿಸಿಕೊಳ್ಳುವುದು ಕಷ್ಟಸಾಧ್ಯವಾಗಿ ತೋರಿತು. ಮಂತ್ರಿ ವಿದ್ಯಾಧರನು ತಾನು ಅದನ್ನು ಸುಲಭವಾಗಿ ಪರಿಷ್ಕಾರ ಮಾಡುವೆನೆಂದು ರಾಜನೊಂದಿಗೆ ಹೇಳಿದನು.

ಮಂತ್ರಿ ಆಸ್ಥಾನದಲ್ಲಿ ಕೆಲಸಮಾಡುವ ಉದ್ಯೋಗಸ್ಥರನ್ನು ಸಮಾವೇಶಗೊಳಿಸಿ, ಅವರನ್ನೇ ಬೋಧಕರಾಗಿ ನಿಯಮಿಸುವ ರಾಜನ ನಿರ್ಣಯವನ್ನು ಕುರಿತು ಅವರಿಗೆ ಹೇಳಿ, "ಇದಕ್ಕಾಗಿ ಹೊಸ ಶಾಲಾ ಭವನಗಳನ್ನು ಕಟ್ಟಿಸಲಿದ್ದೇವೆ. ಕೆಲಸ ಪೂರ್ತಿಯಾದಕೂಡಲೇ ನಿಮಗೆ ತಿಳಿಸುತ್ತೇವೆ. ಅಷ್ಟರೊಳಗೆ ನೀವು ಮುಂದಿನ ತಿಂಗಳು ಮೊದಲನೇ ದಿನ ಕೋಶಾಧಿಕಾರಿಯನ್ನು ಕೇಳಿ, ಪ್ರತ್ಯೇಕ ಸಂಬಳ ತೆಗೆದುಕೊಳ್ಳುತ್ತಾ ಇರಿ" ಎಂದನು.

ಎರಡು ಮೂರು ತಿಂಗಳು ಕಳೆದರೂ ಭವನಗಳು ಪೂರ್ತಿಯಾಗಲಿಲ್ಲ. ಇಷ್ಟರಲ್ಲಿ ಬೋಧಕರಾಗಿ ನಿಯಮಿಸಲ್ಪಟ್ಟವರು ಕೆಲವರು ಪ್ರತ್ಯೇಕ ಸಂಬಳವನ್ನು ತೆಗೆದುಕೊಂಡು ಹೋದರು. ಕೆಲವರು ಪ್ರತ್ಯೇಕ ಸಂಬಳ ತೆಗೆದುಕೊಳ್ಳಲಿಲ್ಲ. ಹಾಗೆ ಪ್ರತ್ಯೇಕ ಸಂಬಳ ತೆಗೆದುಕೊಳ್ಳದಿದ್ದವರನ್ನು ತನ್ನ ಬಳಿಗೆ ಕರೆಯಿಸಿ ಹಾಗೇಕೆಂದು ಕಾರಣ ಕೇಳಿದನು ಮಂತ್ರಿ.

"ಅಯ್ಯಾ, ಇಷ್ಟರವರೆಗೂ ಪಾಠಶಾಲೆಯಲ್ಲಿ ನಾವು ಒಂದುದಿನ ಕೂಡಾ ವಿದ್ಯಾಬೋಧನೆ ಮಾಡಲಿಲ್ಲ. ಹಾಗಿರುವಾಗ ಅದಕ್ಕಾಗಿ ಸಂಬಳ ತೆಗೆದುಕೊಳ್ಳುವುದು ಯಾವನ್ಯಾಯ? ಅದು ನೀತಿಯಾಗುವುದೆ?" ಎಂದರು ಅವರು.

ಮಂತ್ರಿ ರಾಜನೊಂದಿಗೆ ಅವರ ಸಂಗತಿಯನ್ನು ಹೇಳಿ, ನೈತಿಕ ವಿದ್ಯಾಬೋಧನೆಗೆ ಇವರೇ ತಕ್ಕವರೆಂದು ಹೇಳಿದನು. ರಾಜನು ಅವರನ್ನೇ ಪಾಕಶಾಲೆಗಳಲ್ಲಿ ನೈತಿಕವಿದ್ಯಾಬೋಧನೆಗೆ ನಿಯಮಿಸಿ ಒಳ್ಳೆಯ ಸಂಬಳವನ್ನೂ ಏರ್ಪಡಿಸಿದನು.





# ಗೆಲುವು ಯಾರಿಗೆ?

ಒಂದು ಊರಿನಲ್ಲಿ ದೊಡ್ಡ ಬೇಸಾಯಗಾರನೊಬ್ಬನು ಅಕಾಲ ಮರಣ ಹೊಂದಿದಮೇಲೆ, ಅವನ ಹೆಂಡತಿ ಕನಕಮ್ಮಳ ಮೇಲೆಯೇ ಎಲ್ಲಾ ಜವಾಬ್ದಾರಿಯೂ ಬಿದ್ದಿತು. ಅವಳು ನಂಬುಗಸ್ಥರಾದ ಕೂಲಿಗಾರರಿಂದ ಕೆಲಸಮಾಡಿಸುತ್ತ, ಚಿಕ್ಕವರಾಗಿದ್ದ ಇಬ್ಬರು ಮಗಂದಿರನ್ನು ಒಳ್ಳೆಯ ತನದಲ್ಲಿ ಬೆಳೆಯಿಸುತ್ತ ಬಂದಳು. ಅವರು ತಕ್ಕಷ್ಟು ಓದು ಬರೆಹ ಕಲಿತು ದೊಡ್ಡವರಾದಮೇಲೆ, ತಕ್ಕ ಸಂಬಂಧಗಳನ್ನು ನೋಡಿ ಇಬ್ಬರಿಗೂ ಮದುವೆಯನ್ನೂ ಮಾಡಿದಳು.

ಸೊಸೆಯಂದಿರಿಬ್ಬರೂ ಬೆಲೆಬಾಳುವ ಸೀರೆಸಾರಿಗೆ ವಸ್ತು ಒಡವೆಗಳೊಂದಿಗೆ ಮನೆ ತುಂಬಲು ಬಂದರು.

ಕನಕಮ್ಮನದು ಸ್ವಲ್ಪ ದೊಡ್ಡ ಬೇಸಾಯವಾದುದರಿಂದ ಕೂಲಿಗಾರರು ಹೊಲಗದ್ದೆಗಳನ್ನೂ, ಪಶುಗಳನ್ನೂ ನೋಡಿಕೊಂಡಿದ್ದರೂ, ಉಳಿದ ಕೆಲಸಗಳೊಂದಿಗೆ ಅತ್ತೆ ಸೊಸೆಯರಿಗೆ ಉಸಿರಿಗೆಡೆ ಇಲ್ಲದಷ್ಟು ಕೆಲಸವಿದ್ದಿತು. ಸೊಸೆಯರಿಗಿಂತ ಹೆಚ್ಚು ಕೆಲಸ ಕನಕಮ್ಮನಿಗೇ ಇರುತ್ತಿತ್ತು.

ಕನಕಮ್ಮ ಒಳ್ಳೆಯ ಆರೋಗ್ಯಭಾಗ್ಯವಿರುವ ಹೆಂಗುಸು. ಆಳುಕಾಳುಗಳ ಮೇಲ್ವಿಚಾರಣೆಯನ್ನೂ, ಮನೆಗೆಲಸಗಳನ್ನೂ ಈ ಮೊದಲು ಅವಳೊಬ್ಬಳೇ ಮಾಡಿಕೊಳ್ಳುತ್ತಾ ಬಂದಿದ್ದಳು. ಆದರೆ ಇಬ್ಬರು ಸೊಸೆಯರು ಮನೆಗೆ ಬಂದ ಮೇಲೆ ಕೂಡಾ ತನಗೆ ಇಂತಹ ಕೆಲಸಗಳ ಮುತ್ತಿಗೆ ತಪ್ಪದಿರುವುದನ್ನು ನೋಡಿ ಅವಳು ಚಡಪಡಿಸ ತೊಡಗಿದಳು. ಅಧಿಕಾರವಾಗಿ ಹೇಳಲು ಭಯ!

ಇನ್ನುಮೇಲೆ ತಾನು ಕುಳಿತಲ್ಲಿಂದ ಕದಲದೆ ಹೊತ್ತುಹೊತ್ತಿಗೆ ಊಟ ತಿಂಡಿಗಳು ತನ್ನ ಹತ್ತಿರ ಬರುವಂತೆ ಮಾಡಿಕೊಂಡು ಸುಖವಾಗಿರಬೇಕೆಂದು ಅವಳಿಗೆ ತೋರತೊಡಗಿ, ಕಡೆಗೆ ಒಂದು ನಿಶ್ಚಯಕ್ಕೆ ಬಂದಳು ಕನಕಮ್ಮ.

ಆದರೆ ಅವಳ ನಿಶ್ಚಯವು ಒಂದು ಅನುಮಾನದಿಂದ ಕದಲಾಡಿತು, ತನಗೆ ಯಾವ ದೈಹಿಕಬಾಧೆಗಳೇ ಇಲ್ಲದೆ ಸುಮ್ಮನೆ ತಿಂದು ಕೂತುಕೊಳ್ಳುವುದನ್ನು ಸೊಸೆಯಂದಿರು ಒಪ್ಪಿಕೊಳ್ಳಲಾರರೆಂದು ಅವಳಿಗೆ ತೋರಿತು.

ಆದಕ್ಕಾಗಿ ಒಂದು ಉಪಾಯವನ್ನು ಆಲೋಚಿಸಿದಳು. ಇದಕ್ಕಿದ್ದ ಹಾಗೆ ಒಂದು ದಿನ ಕನಕಮ್ಮ ತನಗೆ ಕಣ್ಣು ಕಾಣುವುದಿಲ್ಲವೆಂದೂ, ಕಿವಿ ಕೇಳುವುದಿಲ್ಲ

ಜಿ. ನಿರ್ಮಲಾದೇವಿ

ವೆಂದೂ ಕಿರಿಚಾಡ ತೊಡಗಿದಳು. ಕೋಣೆಯೊಳಗೇ ತಡಕಾಡಿ ಕೆಲವು ಪಾತ್ರೆಗಳನ್ನು ಹೊರಳಾಡಿಸಿದಳು.

ಅದನ್ನು ನೋಡಿ ಅವಳ ಇಬ್ಬರು ಮಗಂದಿರೂ ಗಾಬರಿಯಾಗಿ, ಅವಳಿಗೆ ಕೆಲಸ ಹೆಚ್ಚಾಯಿತೆಂದೂ, ಪೂರ್ತಿ ವಿಶ್ರಾಂತಿಯಾಗಿರಬೇಕೆಂದೂ ಹೇಳಿಕೊಂಡು, ಒಂದು ಕೋಣೆಯನ್ನು ಬಿಟ್ಟುಕೊಟ್ಟು, ಮಂಚ ವಿಳಿದು ಬರಬಾರದೆಂದು ಕಟ್ಟುಪಾಡು ಮಾಡಿದರು. ತಮ್ಮ ತಮ್ಮ ಹೆಂಡತಿಯರಿಗೂ ಜಾಗ್ರತೆಯೆಂದು ಎಚ್ಚರಿಕೆ ಕೊಟ್ಟರು.

ತನ್ನ ಉಪಾಯ ಗೆಲ್ಲುತ್ತಾ ಬರುವುದನ್ನು ನೋಡಿ ಕನಕಮ್ಮನಿಗೆ ಒಳಗೊಳಗೇ ಸಂತೋಷವಾಯಿತು. ಹೊತ್ತು ಹೊತ್ತಿಗೆ ಸೊಸೆಯರು ತಂದು ಉಪಚರಿಸಿ ಬಡಿಸುವ ಊಟವನ್ನೂ ತಿಂಡಿಯನ್ನೂ ತಿನ್ನುತ್ತ ಕಾಲಕ್ಷೇಪ ಮಾಡ ತೊಡಗಿದಳು. ಇದು ಕನಕಮ್ಮನಿಗೆ ಬಹಳ ಸೊಗಸೆನಿಸಿತು.

ಆದರೆ ಸೊಸೆಯಂದಿರಿಬ್ಬರೂ ಒಳ್ಳೆಯ ಬುದ್ಧಿ ಸೂಕ್ಷ್ಮತೆಯುಳ್ಳವರೇ. ಕೆಲವೇ ದಿನಗಳಲ್ಲಿ ಅತ್ತೆಯವರದು ಬರಿಯ ನಟನೆ ಎಂಬುದು ಅವರಿಗೆ ಗೊತ್ತಾಗಿ ಬಿಟ್ಟಿತು. ಅತ್ತೆಯ ಮೇಲೆ ಅವರಿಬ್ಬರಿಗೂ ಒಳ್ಳೆಯ ಗೌರವವಿದ್ದರೂ, ಅವಳ ಈ ಬಗೆಯ ಮೋಸದ ಪ್ರವರ್ತನೆ ಸೊಸೆಯರಿಗೆ ಅಸಹ್ಯವನ್ನುಂಟು ಮಾಡಿತು.

ಒಂದು ದಿನ ಗಂಡಂದಿರು ಹೊಲಗದ್ದೆಗಳಲ್ಲಿ ಕೆಲಸಕ್ಕೆ ಹೊರಟು ಹೋದ ಮೇಲೆ, ಸೊಸೆಯಂದಿರಿಬ್ಬರೂ ಹೊಸ ಬಗೆಯ ಭಕ್ಷ್ಯಗಳನ್ನು ಮಾಡಿ ಅತ್ತೆಗೆ ಕಾಣುವ ಹಾಗೇ ಕುಳಿತುಕೊಂಡು ಹರಟೆ ಹೊಡೆಯುತ್ತಾ, ನಗುತ್ತಾ ತಿನ ತೊಡಗಿದರು.

"ನಮ್ಮ ಅತ್ತೇವರಿಗೆ ಕಣ್ಣೂ ಕಿವಿಯೂ ಹೋದದ್ದು ನಮ್ಮ ಅದೃಷ್ಟಾ ಅನ್ನು. ಅವರು ಇಂಥಾದ್ದನ್ನೆಲ್ಲಾ ಸುಮ್ಮನೆ ಮಾಡಲು ಬಿಡುತ್ತಾರೇನು ? ಇವತ್ತು ಈ ಚಕ್ಕುಲಿ ಏಷ್ಟುಲಗುವಾಗಿದೆ ! ರವೆಕೇಸರಿ ತುಂಬಾ ರುಚಿ ! ನಾಳೆ ಹೋಳಿಗೆ ಮಾಡೋಣ ಕಣೆ !" ಎಂದಳು ಒಬ್ಬಳು.



ಇಂತಹ ಮಾತುಗಳನ್ನು ಕೇಳುತ್ತಾ ಕಿವುಡು ಕುರುಡು ನಟನೆಯ ಅತ್ತೆ ತನ್ನೊಳಗೇ ಕುದಿಯು ತೊಡಗಿದಳು. ಉಕ್ಕುವ ಕೋಪವನ್ನು ಹೊರಗೆ ತೋರಗೊಡದೆ ಮನಸ್ಸಿನೊಳಗೇ, "ಛೀ ಛೀ ! ನನ್ನ ಪಾಲಿಗೆ ಈ ಬಕಮಾರಿಗಳು ಸೊಸೆಗಳಾಗಿ ಬಂದು ವಲ್ಲ ! ಮಾಡಿದ್ದನ್ನು ನನಗೆ ಕೊಡದಿದ್ದರೆ ಹೋಗಲಿ, ಗಂಡಂದಿರಿಗೆ ಕೂಡಾ ಇಡದೆ ಕೊಡದೆ ಹೆಗ್ಗಣಗಳ ಹಾಗೆ ಮುಕ್ಕುತ್ತಿದ್ದಾರೆ" ಎಂದುಕೊಳ್ಳುತ್ತಾ, ಸೊಸೆಯುದಿರು ತಿನ್ನುವ ಭಕ್ಷಗಳಿಂದ ಜೊಲ್ಲಿಳಿಯು ತ್ತಿರಲು, ಬಾಯಿ ಮುಚ್ಚಿ ಗುಟಕರಿಸಿಕೊಳ್ಳುತ್ತಾ ಸುಮ್ಮನಿರುತ್ತಿದ್ದಳು.

ಕಡೆಗೆ ಅದೂ ಅಸಾಧ್ಯವೆನಿಸಿತು. ತನ್ನ ತಂತ್ರ ತನಗೇ ತಿರುಗಿ ಹೊಡೆದಂತೆನಿಸಿತು. ಇನ್ನು ಈ ನಟನೆ ಪ್ರಯೋಜನವಿಲ್ಲವೆಂದು ನಿಶ್ಚಯಿಸಿಕೊಂಡು, ಒಂದು ದಿನ ಕನಕಮ್ಮ, ಮಗಂದಿರು ಮನೆಯಲ್ಲಿರುವ ಸಮಯ ನೋಡಿ, "ಎಲೋ ಮಕ್ಕಳೇ ಬನ್ರೋ ! ನನ್ನ ಪುಣ್ಯ ! ಇವತ್ತು ಕಣ್ಣು ಕಾಣುತ್ತ ಇದೆಯಲ್ರೋ ! ಕಿವಿಯೂ ಕೇಳುತ್ತದೆ ! ದೇವರು ಉಳಿಸಿದರು ! ತನ್ನಂತೆ ಗುಣಮಾಡಿದರು ! ಗುಡಿಯಲ್ಲಿ ಎರಡು ಅರ್ಚನೆ ಮಾಡಿಸಿರಪ್ಪಾ !" ಎಂದಳು.

ಮಕ್ಕಳಿಬ್ಬರೂ ತಾಯಿಯ ಹತ್ತಿರ ಓಡಿಬಂದು "ನಿಜವೇ ಅಮ್ಮಾ ?" ಎಂದರು.

"ನಿಜವೇ ಕಾಣ್ರೋ ! ಎಲ್ಲಾ ಮೊದಲಿನ ಹಾಗೇ ಕಾಣಸ್ತಾ ಇದೆ, ಕೇಳಿಸ್ತಾ ಇದೆ !" ಎಂದು ಕನಕಮ್ಮ ಕೂಗಿ ಹೇಳಿದಳು.

ಇಬ್ಬರು ಸೊಸೆಯಂದಿರೂ ಅತ್ತೆಯ ಹತ್ತಿರ ಓಡಿಬಂದು, "ಆಹಾ ! ನಾವೆಷ್ಟು ಅದೃಷ್ಟವಂತರು ! ಮೊನ್ನೆಯಿಂದ ನಮಗೆ ದಿನಾ ಅತ್ತೆಗೆ ಹುಷಾರಾದಂತೆ ಕನಸಾಗುತ್ತಿತ್ತು. ಅದಕ್ಕಾಗೇ ನಾವು ದಿನಾ ಅತ್ತೆಗೇ ಅಂತ ಮಾಡಿದ್ದನ್ನು ಕಾದಿರಿಸಿದ್ದೇವೆ. ಇಷ್ಟು ಕಾಲದವರೆಗೆ ಚೆನ್ನಾಗಿದ್ದ ಅತ್ತೆಗೆ, ಫಕ್ಕನೆ ಹೀಗೇ ಕಾಯಿತೋ ! ಗುಣವಾಯಿತಲ್ಲ ! ನಮ್ಮ ಪುಣ್ಯ ! ಬನ್ನಿ ಅತ್ತೇ! ಮೊದಲು ಬಾಯಿ ಸೀಮಾಡಿಕೊಳ್ಳಿ!" ಎಂದು ಇಬ್ಬರೂ ಅತ್ತೆಯ ಒಂದೊಂದು ಕೈ ಹಿಡಿದುಕೊಂಡು ಒಳಗೆ ಕರೆದೊಯ್ದರು.

"ಅಬ್ಬ ! ಇನ್ನು ಅತ್ತೆ ಮುಖ್ಯ ಮುಖ್ಯ ಕೆಲಸ ಎಲ್ಲಾ ಮಾಡುತ್ತಾರೆ ! ಅವರ ಅಡಿಗೇ ರುಚಿ ಕಾಣದೆ ನಮ್ಮ ಬಾಯಿ ಬರಡಾಗಿ ಹೋಯಿತು ! ಇನ್ನೇನು ಮೊದಲಿನ ಹಾಗೇ ಎಲ್ಲಾ ಮಾಡ್ತಾರೆ ನಮ್ಮ ಅತ್ತೆ !" ಎಂದರು ಆ ಜಾಣ ಸೊಸೆಯರು.

ಕೆಲಸಮಾಡುವ ಶಕ್ತಿ ಇದ್ದೂ, ಕಳ್ಳ ನಾಟಕ ತೋರಿಸಿದ ಅತ್ತೆಗೆ ಒಳ್ಳೇ ಬುದ್ಧಿ ಕಲಿಸಿದೆವೆಂದು ಆ ಸೊಸೆಯರು ತಮ್ಮೊಳಗೇ ಅಂದುಕೊಂಡು ಗುಟ್ಟಾಗಿ ನಕ್ಕರು.



# ಗಂಗೆಯ ಸ್ನಾನ

ಸುಬ್ಬರಾಮಯ್ಯನವರಿಗೆ ತಾನು ಅನೇಕ ಪಾಪಗಳನ್ನು ಮಾಡಿದವನೆಂದು ಗೊತ್ತಾಗಿತ್ತು. ಗಂಗೆಯಲ್ಲಿ ಮುಳುಗಿದರೆ ಎಲ್ಲಾ ಪಾಪಗಳೂ ಪರಿಹಾರವಾಗುವುದೆಂದು ಹೇಳುತ್ತಾರಷ್ಟೆ? ಆದರೆ ಗಂಗಾನದಿಯ ವರೆಗೆ ಹೋಗಿ ಬರಲು ತುಂಬಾ ಹಣ ಖರ್ಚಾಗುತ್ತದೆ. ಅವರದು ದೊಡ್ಡ ಲೋಭಗುಣ.

ಆದಕ್ಕಾಗಿ ಏನು ಉಪಾಯವೆಂದು ನೋಡುತ್ತಿರುವಾಗ, ನಾಲ್ಕನೇ ಮನೆಯ ಶೀನಯ್ಯ ಕಾಶಿಗೆ ಹೋಗಲಿರುವನೆಂದು ತಿಳಿದು, ಸುಬ್ಬರಾಮಯ್ಯ ಶೀನಯ್ಯನ ಬಳಿಗೆ ಹೋಗಿ, "ನನಗೂ ಗಂಗಾನದಿಯ ಅಗತ್ಯವಿತ್ತು. ಹೋಗಿ ಬರಲು ಮುನ್ನೂರಾದರೂ ಖರ್ಚಾಗುತ್ತದೆ. ನೀವು ಹೇಗೂ ಹೋಗುವಿರಾದ್ದರಿಂದ, ನನ್ನ ಪಾಪಗಳೂ ಹೋಗುವಂತೆ ನನ್ನನ್ನೂ ಸಹಾ ನೆನೆದುಕೊಂಡು ಗಂಗೆಯಲ್ಲಿ ಮೂರು ಮುಳುಗು ಹಾಕಿ ಬಂದುಬಿಡಿ. ಅದಕ್ಕಾಗಿ ನೂರು ರೂಪಾಯಿ ತೆಗೆದುಕೊಳ್ಳಿ" ಎಂದರು.

ಶೀನಯ್ಯ ಸರಿ ಎಂದು ಸುಬ್ಬರಾಮಯ್ಯನಿಂದ ನೂರು ರೂಪಾಯಿ ತೆಗೆದುಕೊಂಡನು. ಆದರೆ ಅವನು ಕಾಶಿಗೆ ಹೋಗಲೇ ಇಲ್ಲ.

"ಏನು ಶೀನಯ್ಯಾ ಯಾವಾಗ ನಿಮ್ಮ ಪ್ರಯಾಣ?" ಎಂದು ಸುಬ್ಬರಾಮಯ್ಯ ಕೇಳಿದರು.

"ಕಾಶಿಗೆ ಹೋಗುವುದಿಲ್ಲ. ನಮ್ಮೂರ ಕೆರೆಯನ್ನೇ ಗಂಗೆ ಎಂದು ತಿಳಿದು, ನಿಮ್ಮ ಲೆಕ್ಕದ್ದೂ, ನನ್ನ ಲೆಕ್ಕದ್ದೂ ಸೇರಿ ಮುಳುಗು ಹಾಕಿದ್ದೇನೆ" ಎಂದನು ಶೀನಯ್ಯ.





# ತಪಸ್ಸಿನ ಫಲ

ಪೂರ್ವಕಾಲದಲ್ಲಿ ಪ್ರದೀಪಸಾಮ್ರಾಜ್ಯವನ್ನಾಳಿಕೊಂಡು ರಾಜ್ಯವರ್ಧನನೆಂಬ ಮಹಾರಾಜನಿದ್ದನು. ಪ್ರಜೆಗಳು ಮಹಾರಾಜನನ್ನು ತಮ್ಮ ತಂದೆಯನ್ನು ನೋಡುವಹಾಗೆ ನೋಡುತ್ತಿದ್ದರು. ಅದಕ್ಕೆ ತಕ್ಕಂತೆ ರಾಜನು ಕೂಡಾ ಅವರನ್ನು ತನ್ನ ಮಕ್ಕಳ ಹಾಗೆಯೇ ನೋಡಿಕೊಳ್ಳುತ್ತಿದ್ದನು.

ಒಂದುದಿನ ರಾಣಿ ಮಹಾರಾಜನ ತಲೆಗೆ ಸ್ವತಃ ಎಣ್ಣೆ ತಡುವುತ್ತಾ ಇದ್ದಳು. ಆಗ ಅವಳ ಕಣ್ಣುಗಳಿಂದ ನೀರಿಳಿಯುವುದನ್ನು ಗಮನಿಸಿ ರಾಜನು, "ಯಾಕೆ ಕಣ್ಣೀರು?" ಎಂದು ಕಾರಣ ಕೇಳಿದನು. ಅದಕ್ಕೆ ರಾಣಿ ದುಃಖಗದ್ಗದಿತ ಕಂಠದಿಂದ, "ಏನೆಂದು ಹೇಳಲಿ? ನಿಮ್ಮ ತಲೆಯ ಕೂದಲುಗಳು ನರೆತು ಹೋಗಲು ಶುರುವಾಗಿವೆ. ಮುದುಕತನವು ಬರುತ್ತದಲ್ಲಾ ಅಂತ ದುಃಖಬಂದುಬಿಟ್ಟು!" ಎಂದು ಕಣ್ಣೀರು ಒರೆಸಿಕೊಂಡಳು.

ಅದನ್ನು ಕೇಳಿ ರಾಜನು "ಅದಕ್ಕಾಗಿಯೋ ಇಷ್ಟೊಂದು ಚಿಂತೆ ಪಡುವಿ? ಮುದುಕತನವು ಎಲ್ಲರಿಗೂ ಬರುವಂಥಾದ್ದು ತಾನೆ? ಅದರ ಹಿಂದೆ ಮರಣ ಕೂಡದಾ ಬೆಂಬತ್ತಿಕೊಂಡೇ ಇದೆ ಅನ್ನು. ಇದೆಲ್ಲಾ ಸಹಜ. ಈ ದಿನ ಅಲ್ಲದಿದ್ದರೆ ನಾಳೆಯಾದರೂ ಸಾಯಬೇಕಾದವರೇ ಎಲ್ಲರೂ. ಅದಕ್ಕಾಗಿ ಚಿಂತೆಮಾಡಿ ಪ್ರಯೋಜನವೇನಿಲ್ಲ" ಎಂದು ಹೆಂಡತಿಯನ್ನು ಸಮಾಧಾನ ಪಡಿಸಿದನು.

ಆದರೆ ರಾಣಿಗೆ ದುಃಖವೇನೂ ಕಡಿಮೆಯಾಗಲಿಲ್ಲ. ತನ್ನ ಗಂಡನಿಗೆ ಆಯುಷ್ಯ ವೃದ್ಧಿಯಾಗುವಂತೆ ಮುಕ್ಕೋಟಿದೇವತೆಗಳನ್ನೂ ಪ್ರಾರ್ಥಿಸತೊಡಗಿದಳು. ಅವಳ ದುಃಖವನ್ನು ನೋಡಿ ರಾಜನಿಗೂ ಚಿಂತೆ ಹಿಡಿಯಿತು. ಈ ಚಿಂತೆಯಿಂದ ರಾಜನು ದಿನದಿಂದ ದಿನಕ್ಕೆ ಕೃಶನಾಗ ತೊಡಗಿದನು. ಕ್ರಮವಾಗಿ ರಾಜ್ಯ ವ್ಯವಹಾರಗಳನ್ನು ಕೂಡಾ ಹಿಡಿಸಿಕೊಳ್ಳದೆ ಕೆಳಗೆ ಜಾರುತ್ತಿದ್ದನು ಮಹಾರಾಜ.

ಈ ಪರಿಸ್ಥಿತಿಯನ್ನು ಗಮನಿಸಿದ ಮಂತ್ರಿ ಇದಕ್ಕೇನು ಪರಿಹಾರವೆಂದು ತೀವ್ರವಾಗಿ ಆಲೋಚನೆ ಮಾಡತೊಡಗಿದನು. ವೃದ್ಧಾಪ್ಯದೊಂದಿಗೆ ಮಾನಸಿಕ ಆರೋಗ್ಯವನ್ನು ಕೂಡಾ ಕಳೆದುಕೊಳ್ಳುತ್ತಿರುವ ರಾಜನನ್ನು ರಾಜ್ಯಾಧಿಕಾರದಿಂದ ತಪ್ಪಿಸುವುದೇ ರಾಜ್ಯಕ್ಕೆ ಕ್ಷೇಮವೆಂದು ಅವನಿಗೆ ತೋರಿತು. ರಾಜ್ಯ ಭಾರವನ್ನು ಧರಿಸಿಕೊಳ್ಳಲು ಪ್ರಾಯಸಮರ್ಥನಾದ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ

ರಾಜನ ಹಿರಿಯ ಮಗನು ಇದ್ದೇ ಇದ್ದಾನೆ. ಅಂತೆಯೇ ಮಂತ್ರಿ ಇರುವ ಸಂಗತಿಯನ್ನು ಮರೆಮಾಜದೆ ರಾಜನೊಂದಿಗೆ ಬಿನ್ನವಿಸಿಕೊಂಡನು.

ಹಾಗಾದರೆ ಹಿರಿಯ ಮಗನಿಗೆ ಪಟ್ಟಾಭಿಷೇಕ ಮಾಡಿ, ಎಲ್ಲ ಭಾರವನ್ನೂ ಅವನಿಗೊಪ್ಪಿಸಿ, ತಾನು ತಪಸ್ಸುಮಾಡಿಕೊಳ್ಳಲು ಕಾಡಿಗೆ ಹೋಗುವುದೇ ಒಳ್ಳೆಯದೆಂದು ರಾಜನಿಗೆ ತೋರಿತು. ಮರುದಿನ ರಾಜನು ಪುರೋಹಿತರನ್ನು ಕರೆಯಿಸಿ ಪಟ್ಟಾಭಿಷೇಕಕ್ಕೆ ಮುಹೂರ್ತವಿಡಲು ಹೇಳಿದನು.

ಈ ಸಂಗತಿ ಪ್ರಜೆಗಳಿಗೂ ತಿಳಿಯಿತು. ಅವರೆಲ್ಲಾ ಸುಮ್ಮನಿರದೆ, ಗುಂಪಾಗಿ ರಾಜನ ಬಳಿಗೆ ಬಂದು "ಮಹಾಪ್ರಭೂ ! ತಾವು ಇಷ್ಟುಕಾಲದ ವರೆಗೆ ನಮ್ಮನ್ನೆಲ್ಲಾ ಹೆತ್ತ ಮಕ್ಕಳ ಹಾಗೆ ಕಾಪಾಡಿಕೊಂಡು ಬಂದಿದ್ದೀರಿ. ಈಗ ನಮ್ಮನ್ನು ಬಿಟ್ಟು ಹೋಗುವಿರೆಂದರೆ ನಮಗೆ ದುಃಖ ತಾಳಲಾಗದು. ಆದುದರಿಂದ ತಾವು ಅರಣ್ಯಕ್ಕೆ ಹೋಗಬಾರದು. ನಮ್ಮ ಬೇಡಿಕೆಯನ್ನು ಒಪ್ಪದೆ ತಾವು ಅರಣ್ಯಕ್ಕೆ ಹೋದರೆ ನಾವು ಕೂಡಾ ನಿಮ್ಮೊಂದಿಗೇ ಬರುತ್ತೇವೆ" ಎಂದರು ಏಕ ಕಂಠದಿಂದ.

ಅದಕ್ಕೆ ರಾಜನು, "ಪ್ರಜೆಗಳೇ, ಮಾನವರಿಗೆ ಹುಟ್ಟಿನ ಜತೆಯಲ್ಲಿ ಸಾವು ಕೂಡಾ ಹುಟ್ಟಿಕೊಂಡಿದೆ. ಯಾರೇ ಆದರೂ ಒಂದುದಿನ ಸಾಯಲೇ ಬೇಕು. ನಾನು ಅರಣ್ಯಕ್ಕೆ ಹೋಗದೇ ಇದ್ದರೂ ಮರಣವು ನನ್ನ ಬೆನ್ನನ್ನು ಬಿಡಲಾರದು. ಆದುದರಿಂದ ಈ ಮುದುಕಪ್ರಾಯದಲ್ಲಿಯಾದರೂ ತಪಸ್ಸು ಮಾಡುತ್ತ ಶೇಷಾಯುಷ್ಯ ಕಳೆಯಬೇಕೆಂದಿದ್ದೇನೆ. ನೀವೇನೂ ಹೆದರಬೇಕಾಗಿಲ್ಲ. ನನ್ನ ಕುಮಾರನು ನಿಮಗೆಲ್ಲಾ ಗೊತ್ತು. ಅವನನ್ನೇ ರಾಜನಾಗಿ ನಿಯಮಿಸಿಹೋಗುವೆ ನಷ್ಟೆ ?" ಎಂದನು. ಆದರೂ ಪ್ರಜೆಗಳು ಸುಮ್ಮನಾಗಲಿಲ್ಲ. ಅವರೊಳಗಿನ ಕೆಲವು ಮಂದಿ ಪ್ರಮುಖರು ಪುಣ್ಯಕ್ಷೇತ್ರಗಳಿಗೆ ಹೋಗಿ, ತಮ್ಮ ರಾಜನಿಗೆ



ಆಯುಷ್ಯವು ವೃದ್ಧಿಯಾಗಬೇಕೆಂದು ತಪಸ್ಸು ಮಾಡಲು ತೊಡಗಿದರು.

ಆಗ ಒಬ್ಬ ಗಂಧರ್ವನು ಅವರ ಮುಂದೆ ಪ್ರತ್ಯಕ್ಷನಾಗಿ, "ನಿಮ್ಮ ಅಭಿಲಾಷೆ ನೆರವೇರಬೇಕಾದರೆ, ಪ್ರತ್ಯಕ್ಷ ದೈವವಾದ ಸೂರ್ಯಭಗವಾನನನ್ನು ಪ್ರಾರ್ಥಿಸಬೇಕು. ಅದಕ್ಕೆ ಇದು ತಕ್ಕಸ್ಥಳವಲ್ಲ. ಕಾಮರೂಪ ಪರ್ವತದ ಮೇಲೆ ಹೋಗಿ ಸೂರ್ಯನನ್ನು ಧ್ಯಾನಿಸಿ ಮೆಚ್ಚಿಸಿರಿ. ಅವನಿಂದ ನಿಮ್ಮ ಇಷ್ಟ ಕೈಗೂಡುತ್ತದೆ" ಎಂದಷ್ಟೇ ಹೇಳಿ ಅದೃಶ್ಯನಾಗಿಹೋದನು.

ಅದಕ್ಕೆ ಆ ಪ್ರಜಾಪ್ರಮುಖರು ಸಂತೋಷಪಟ್ಟು ಕಾಮರೂಪ ಪರ್ವತದ ಮೇಲೆ ಹೋಗಿ ಸೂರ್ಯಭಗವಾನನನ್ನು ಕುರಿತು ಘೋರವಾದ ತಪಸ್ಸಿಗೆ ಕುಳಿತರು. ಸ್ವಲ್ಪಕಾಲದಲ್ಲಿ ಸೂರ್ಯನು ಪ್ರತ್ಯಕ್ಷನಾಗಿ, "ಭಕ್ತರೇ, ನಿಮ್ಮ ಇಚ್ಛೆಯ ಪ್ರಕಾರ ರಾಜ್ಯವರ್ಧನ ರಾಜನು ಇನ್ನೂ ಸಾವಿರ ವರ್ಷ ಬದುಕುವಂತೆ ವರ

ವನ್ನು ಕೊಡುತ್ತೇನೆ" ಎಂದು ಹೇಳಿ ಮಾಯವಾದನು. ತಪಸ್ಸು ಫಲಿಸಿತೆಂದು ಅವರೆಲ್ಲರೂ ಸಂತೋಷ ಪಟ್ಟರು. ತಾವು ಪಡೆದ ಸೂರ್ಯಾನುಗ್ರಹವನ್ನು ಕುರಿತು ಅವರು ಬಂದು ರಾಜನೊಂದಿಗೆ ಹೇಳಿದರು. ಆ ಸಮಾಚಾರವನ್ನು ಕೇಳಿ ರಾಜನಿಗೆ ಸಂತೋಷ ವೇನೂ ಆಗಲಿಲ್ಲ. ಅದನ್ನು ನೋಡಿ ರಾಣಿ, "ಪ್ರಜೆಗಳು ನಿಮ್ಮ ಮೇಲಿನ ಭಕ್ತಿವಿಶ್ವಾಸಗಳಿಂದ ಸೂರ್ಯಭಗವಾನನನ್ನು ಪ್ರಾರ್ಥಿಸಿ ನಿಮಗೆ ಆಯುಷ್ಯ ವೃದ್ಧಿಯಾಗುವಂತೆ ವರಪಡೆದು ಬಂದಿದ್ದಾರಲ್ಲಾ ? ಇನ್ನೇಕೆ ಚಿಂತೆಮಾಡುವಿರಿ ?" ಎಂದು ಕೇಳಿದಳು.

ಅದಕ್ಕೆ ರಾಜನು, "ನೀನು ಹೇಳಿದುದೆಲ್ಲಾ ಸರಿ, ಚೆನ್ನಾಗಿದೆ. ನನ್ನ ಪ್ರಜೆಗಳು ನನಗಾಗಿ ತಪಸ್ಸು ಮಾಡಿ ವರಪಡೆದು ಬಂದಿದ್ದಾರೆ. ನಾನೊಬ್ಬನೇ ಸಾವಿರ ವರ್ಷಗಳ ವರೆಗೆ ಜೀವಿಸಿರುತ್ತೇನೆ. ನನ್ನ ಮೇಲೆ ಇಷ್ಟೊಂದು ಪ್ರೀತಿ ಗೌರವಗಳುಳ್ಳ ಈ ಪ್ರಜೆಗಳು ಅಷ್ಟರವರೆಗೆ ಬದುಕಿರುವುದಿಲ್ಲವಷ್ಟೆ ? ನನ್ನೊಂದಿಗೆ ನನ್ನ ಪ್ರಜೆಗಳು ಕೂಡಾ ಸಾವಿರ ವರ್ಷ ಬದುಕಿರದಿದ್ದರೆ ನನಗೆ ಸಂತೋಷವೆಲ್ಲಿಯದು? ಆದ್ದರಿಂದ ನಾನು ಕೂಡಾ ಅದೇ ತಪಸ್ಸುಮಾಡಿ ನಾನಿರುವ ವರೆಗೆ ನನ್ನ ಪ್ರಜೆಗಳೂ ಜೀವಿಸಿರುವ ಹಾಗೆ ವರಪಡೆಯುತ್ತೇನೆ." ಎಂದು ಹೇಳಿ ಕಾಮ ರೂಪ ಪರ್ವತಕ್ಕೆ ಹೋಗಿ ಶ್ರದ್ಧಾಭಕ್ತಿಗಳಿಂದ ಸೂರ್ಯಭಗವಾನನ ತಪಸ್ಸಿಗೆ ಕುಳಿತನು.

ಒಂದೆರಡಂ ವರ್ಷಗಳಲ್ಲಿ ರಾಜ್ಯದವ್ಯವಹಾರಗಳು ಸ್ವಲ್ಪಸ್ವಲ್ಪವಾಗಿ ಕುಂಟತೊಡಗಿದುವು. ಆದರೂ ಬಹುಮಂದಿ ಪ್ರಜೆಗಳು ನೀತಿಪ್ರವರ್ತಕರಾದುದರಿಂದ ದೇಶದಲ್ಲಿ ಅರಾಜಕವೇನೂ ಬರಲಿಲ್ಲ. ತಮ್ಮ ರಾಜನ ತಪಸ್ಸುಯಾವಾಗ ಫಲಿಸುವುದೋ ಎಂದು ಪ್ರಜೆಗಳು ಆತುರದಿಂದ ಇದಿರು ನೋಡಿಕೊಂಡಿದ್ದರು. ದಿನಾ ಸಾವಿರಾರು ಮಂದಿ ಪ್ರಜೆಗಳು ಕಾಮರೂಪ ಪರ್ವತಕ್ಕೆ ಹೋಗಿ ರಾಜನನ್ನು ದರ್ಶನಮಾಡಿ ಹಿಂದಿರುಗುತ್ತಿದ್ದರು.

ಕಡೆಗೊಂದುದಿನ ಸೂರ್ಯಭಗವಾನನು ರಾಜ್ಯ ವರ್ಧನನ ದೀಕ್ಷೆಗೆ ಮೆಚ್ಚಿಕೊಂಡನು. ಸೂರ್ಯನು ರಾಜನ ಮುಂದೆ ಪ್ರತ್ಯಕ್ಷನಾಗಿ, "ರಾಜಾ, ನಿನ್ನ ಒಳ್ಳೆಯ ತನಕ್ಕೆ ಮೆಚ್ಚಿದ್ದೇನೆ. ನಿನ್ನ ತಪಸ್ಸು ಫಲಿಸಿತು. ನಿನ್ನ ಇಚ್ಛೆಯಂತೆಯೇ ನೀನು ಜೀವಿಸಿರು ವಷ್ಟು ಕಾಲದ ವರೆಗೆ ನಿನ್ನ ಪ್ರಜೆಗಳೂ ಜೀವಿಸಿರು ತ್ತಾರೆ," ಎಂದು ವರವನ್ನು ಕೊಟ್ಟು ಅದೃಶ್ಯ ನಾದನು, ಸೂರ್ಯಭಗವಾನನ ಅನುಗ್ರಹದಿಂದ ರಾಜ್ಯವರ್ಧನನೂ, ಅವನ ಪ್ರಜೆಗಳೂ ಸಾವಿರ ವರ್ಷಗಳವರೆಗೆ ಸಕಲಸೌಖ್ಯಗಳನ್ನೂ ಅನುಭವಿಸಿ ಕೊಂಡು ಜೀವಿಸಿದರು.






ಒಂದಾನೊಂದು ದಿನ ಲಕ್ಷ್ಮೀದೇವಿ ಮಾನಸ ಸರೋವರದಲ್ಲಿ ಸ್ನಾನ ಮಾಡುವುದರಲ್ಲಿ ತಲ್ಲೀನಳಾಗಿದ್ದಳು. ಅವಳ ಸೌಂದರ್ಯಾತಿಶಯವನ್ನು ನೋಡಿ ಪಾರ್ವತಿಗೆ ಒಂದು ಬಗೆಯ ಮೋಹ ಉಂಟಾಯಿತು. ಆಗ ಪಾರ್ವತಿ ವಿಷ್ಣುವಿನ ರೂಪ ಧರಿಸಿಕೊಂಡು ಅಲ್ಲಿಗೆ ಬಂದಳು. ನವಮೋಹನನಾಗಿ ಕಾಣಿಸಿದ ನಾರಾಯಣನನ್ನು ಲಕ್ಷ್ಮಿಯೂ ನೋಡಿದಳು. ನಾರಾಯಣನೂ ಲಕ್ಷ್ಮಿಯೂ ಕೈ ಕೈ ಹಿಡಿದುಕೊಂಡು ಸ್ವಲ್ಪ ಹೊತ್ತು ಸರೋವರದ ಸುತ್ತಲೂ ವಿಹರಿಸಿದರು. ಅವರಿಬ್ಬರೂ ಒಬ್ಬರನೊಬ್ಬರು ನೋಡಿಕೊಳ್ಳುವುದರಲ್ಲೇ ತಲ್ಲೀನರಾಗಿದ್ದಾಗ, ಸರೋವರದಲ್ಲಿ ಒಂದು ಸುವರ್ಣಕಮಲವು ಎದ್ದು ಬಂದಿತು. ಅದರ ಮಧ್ಯದಲ್ಲಿ ಜಗಜಗನೆಹೊಳೆಯುವ ಒಂದು ಹಸುಗೂಸೂ ಇದ್ದಿತು, ಹೆಣ್ಣು ಶಿಶು.

ಆಗ ಲಕ್ಷ್ಮಿ, ನಾರಾಯಣನನ್ನು ನೋಡಿ ಗಾಢವಾಗಿ ಆಲಿಂಗಿಸಲು, ನಾರಾಯಣ ರೂಪದ ಪಾರ್ವತಿ ಗಲಗಲನೆ ನಗುತ್ತ, "ನಾನು ನಿನ್ನ ನಾರಾಯಣನಲ್ಲ ಕಣೇ!" ಎಂದು ನಿಜರೂಪದಿಂದ ನಿಂತಳು.

"ಓಹ್! ನೀನೋ ಇಷ್ಟೂ ಮಾಡಿದವಳು! ಅಣ್ಣನಿಗೆ ತಕ್ಕ ತಂಗಿಯೇ ಸರಿ! ಆ ದಿನ ವಿಷ್ಣು ಮೋಹಿನೀರೂಪದಿಂದ ಶಿವನಿಗೆ ಮಾಯೆ ಕವಿಸಿದುದಕ್ಕೆ ಇದೀಗ ಸರಿಯಾಯಿತು!" ಎಂದಳು.

ಸ್ವರ್ಣಕಮಲದ ಮಧ್ಯದಲ್ಲಿರುವ ಶಿಶುವನ್ನು ನೋಡಿ ಇಬ್ಬರೂ ಮುಗ್ಧರಾದರು. ಅಪಾರ ಪ್ರೇಮ ಉಕ್ಕಲು ಇಬ್ಬರೂ ಸೇರಿ ಶಿಶುವನ್ನು ಕೈಗೆತ್ತಿಕೊಂಡರು.

ಆಗ ಅಲ್ಲಿಗೆ ಥಕ್ಕನೆ ವಿಘ್ನೇಶ್ವರನು ಬಂದು ನಿಂತು, "ಅಮ್ಮಗಳಿರಾ! ನಿಮ್ಮಿಬ್ಬರ ಅಂಶಗಳಿಂದ ಅವತರಿಸಿದ ಈ ಮಗು ಪಾರ್ವತಿಯ ಗುರುತಿಗಾಗಿ ಜಯಳೆಂದೂ, ಲಕ್ಷ್ಮೀದೇವಿಯ ಗುಗುತಿಗಾಗಿ ಶ್ರೀ ಎಂದೂ ಕೂಡಿ ಜಯಶ್ರೀ ಎನಿಸಿ ಬೆಳೆಯುವಳು. ಇವಳಿಗ ತಕ್ಕ ವರನು ಕೂಡಾ ಶಿವಕೇಶವರ ಅಂಶಗಳಿಂದಲೇ ಅವತರಿಸಿದ್ದಾನೆ" ಎಂದನು. ಆಮೇಲೆ ವಿಘ್ನೇಶ್ವರನು ವಾಯುವನ್ನು ಕರೆದು, ಶಿಶಿವಿನೊಂದಿ

೧೧. ವಿಘ್ನೇಶ್ವರನ ಲೀಲೆಗಳು



ಗಿರುವ ಸ್ವರ್ಣಕಮಲವನ್ನು ಕಾವೇರೀನದಿಯತೀರದಲ್ಲಿ ಬಿಟ್ಟುಬರುವಂತೆ ಹೇಳಿದನು.

ವಾಯುದೇವನು ಆ ಸ್ವರ್ಣಕಮಲವನ್ನು ಕಾವೇರಿನದಿಯಲ್ಲಿ ಸೇರಿಸಿ ಹೊರಟುಹೋದನು.

ಆಗ ದಕ್ಷಿಣಪ್ರಾಂತವನ್ನು ಪಾಲಿಸಿಕೊಂಡಿದ್ದ ಮಹಾರಾಜನು ಕಾವೇರೀ ನದಿಯಲ್ಲಿ ತೇಲಿ ಬರುವ ಸ್ವರ್ಣಕಮಲವನ್ನೂ, ಅದರ ನಡುವಿನಲ್ಲಿದ್ದ ಮುದ್ದಾದ ಮಗುವನ್ನೂ ನೋಡಿ ಎತ್ತಿಕೊಂಡನು. ಮಕ್ಕಳಿಲ್ಲದ ತನಗೆ ವರಪ್ರಸಾದವಾಗಿ ಈ ಮಗು ದೊರಕಿತೆಂದು ಸಂತೋಷದಿಂದ, ಭಾರಿವೈಭವದಿಂದ ನಾಮಕರಣ ಮಹೋತ್ಸವವನ್ನು ಪ್ರಾರಂಭಿಸಿದನು. ಮೊದಲು ವಿಘ್ನೇಶ್ವರ ಪೂಜೆಮಾಡಿದಕೂಡಲೇ, "ರಾಜಾ ! ನಿನ್ನ ಮಗಳಿಗೆ ಜಯಶ್ರೀ ಎಂದು ಹೆಸರಿಡು !" ಎಂದು ಅಶರೀರವಾಣಿಯಾಯಿತು.

ಹೀಗೆ ಬೆಳೆಯುವ ಜಯಶ್ರೀ ರಾಜಕುಮಾರಿ ಮೂರುಲೋಕಗಳಲ್ಲಿಯೂ ಸೌಂದರ್ಯದಲ್ಲಿ ಸಾಟಿಯಿಲ್ಲದವಳೆನಿಸಿದಳು. ಅದರ ಮೇಲೆ ವೀರಳೂ ಧೀರಳೂ ಆದ ಜಯಶ್ರೀ ಕುಮಾರಿಗೆ ರಾಜಭವನ ದೊಳಗಿರುವುದಕ್ಕಿಂತಲೂ, ಪ್ರಕೃತಿ ಸೌಂದರ್ಯ ಗಳೊಂದಿಗೆ ತುಂಬಿರುವ ಅರಣ್ಯಗಳಲ್ಲಿ ವಿಹರಿಸುವುದೇ ಇಷ್ಟವಾಗಿತ್ತು. ಅವಳು ಬಿಲ್ಲು ಬಾಣಗಳನ್ನು ಧರಿಸಿ ಕೊಂಡು ಅಡವಿಗಳಲ್ಲಿ ವಿನೋದವಾಗಿ ವನ್ಯಮೃಗ ಗಳನ್ನು ವಶಪಡಿಸಿಕೊಂಡು ಲಲ್ಲೆಯಾಡುತ್ತ ವಿಹರಿಸಿ ಕೊಂಡಿದ್ದಳು.

ಹರಿಹರಾಂಶದಿಂದ ಅವತರಿಸಿದ ಭೈರವಸ್ವಾಮಿ ಕೈಲಾಸಕ್ಕೆ ಹೋಗಿ, ವಿಘ್ನೇಶ್ವರನನ್ನೂ, ಕುಮಾರ ಸ್ವಾಮಿಯನ್ನೂ ನೋಡಿಬರಬೇಕೆಂದು ಬಹಳ ಕಾಲದಿಂದ ಅಂದುಕೊಂಡಿದ್ದನು. ಒಂದು ದಿನ ಒಳ್ಳೆಯ ಸಮಯನೋಡಿ ಭೈರವಸ್ವಾಮಿ ಕೈಲಾಸಕ್ಕೆ ಹೋಗಿ, ವಿಘ್ನೇಶ್ವರನೊಂದಿಗೂ, ಕುಮಾರಸ್ವಾಮಿ ಯೊಂದಿಗೂ ಮನದಣಿಯೆ ಮಾತಾಡುತ್ತ ಅವ ರೊಂದಿಗೆ ತಿರುಗಾಡಿದನು. ಮೂವರೂ ಮಾನಸ ಸರೋವರದಲ್ಲಿ ಜಲವಿಹಾರ ಮಾಡತೊಡಗಿದರು. ಆಗ ವಿಘ್ನೇಶ್ವರನು "ಈ ಮಾನಸಸರೋವರದಲ್ಲಿಯೇ ಲಕ್ಷ್ಮಿಪಾರ್ವತಿಯರ ತೇಜಸ್ಸಿನಿಂದ ನಮ್ಮ ಅಣ್ಣ ಸ್ವಾಮಿಗೆ ತಕ್ಕ ಒಬ್ಬಳು ಶ್ರೀಮತಿ ಉದಯಿ ಸಿದ್ದಾಳೆ !" ಎಂದು ಹೇಳಿ ಸುಮ್ಮನಾದನು.

ಭೈರವಸ್ವಾಮಿಗೆ ಏನೋ ಕುತೂಹಲವೆನಿಸಿದರೂ, ಅಡಗಿಸಿಕೊಂಡು ಕೆಲವು ದಿನ ಕೈಲಾಸದಲ್ಲಿದ್ದು, ಹೊರಟುಹೋಗಲು ಸಿದ್ಧನಾದನು. ಆಗ ವಿಘ್ನೇಶ್ವರನು, "ಭೈರವಣ್ಣಾ! ನಮಗಿಂತ ದೊಡ್ಡವ ನಾದ ನೀನು ಮಹಾಸ್ವಾಮಿಯಾಗಿದ್ದು ಹೀಗೆ ಬ್ರಹ್ಮ ಚಾರಿ ಯಾಗಿರುವುದು ಎಷ್ಟು ಮಾತ್ರಕ್ಕೂ ಚೆನ್ನಾಗಿಲ್ಲ. ಬೇಗದಲ್ಲೇ ನಿನಗೆ ಕಲ್ಯಾಣವಾಗುತ್ತದೆ !" ಎಂದನು.

ವಿಘ್ನೇಶ್ವರನೂ ಕುಮಾರಸ್ವಾಮಿಯೂ ಭೈರವ ಸ್ವಾಮಿಯನ್ನು ಗೌರವದಿಂದ ಕಳುಹಿಸಿಕೊಟ್ಟರು. ಸ್ವಾಮಿ ತನ್ನ ನಿವಾಸದ ಕಡೆಗೆ ಬಂದು ಸೇರಿದನು.

ಒಂದುದಿನ ಭೈರವಸ್ವಾಮಿ ವಿನೋದವಾಗಿ ದೊಡ್ಡದೊಂದು ಹುಲಿಯ ಮೇಲೆ ಆರೋಹಿಸಿ ಅರಣ್ಯದೊಳಗೆ ಸವಾರಿಮಾಡಿಕೊಂಡು ತಿರುಗುವಾಗ, ಇದ್ದಕ್ಕಿದ್ದ ಹಾಗೆ ಅವನ ಹುಲಿಗೆ ಕದಲಲಾಗದಂತೆ ಸುತ್ತಲಿಂದಲೂ ರಿವ್ವರಿವ್ವನೆ ಬಾಣಗಳು ಬಂದು ನೆಲದಲ್ಲಿ ನಾಟಿದುವು. ಆ ಬಾಣಗಳು ಬರುವ ದಿಕ್ಕನ್ನು ಕೋಪದಿಂದ ನೋಡಿದನು ಭೈರವಸ್ವಾಮಿ. ಆ ದೃಶ್ಯವು ಕಣ್ಣಿಗೆ ಬಿದ್ದಕೂಡಲೇ ಅವನ ಕೋಪವು ಚೂರುಚೂರಾಗಿ ಹಾರಿಹೋಯಿತು. ಬಿಲ್ಲು ಬಾಣಗಳೊಂದಿಗೆ ಠೀವಿಯೂ ಒಯ್ಯಾರವೂ ಕಲೆತು, ಮುಗುಳುನಗುವಿನ ಸುಂದರೀಮಣಿಯನ್ನು ನೋಡಿ ಭೈರವಸ್ವಾಮಿ ದಂಗುಬಡಿದವನಾದನು. ತನ್ನ ಎದೆಯಲ್ಲಿ ಚುಚ್ಚಿಕೊಂಡ ಹೂಬಾಣಗಳ ಆವೇದನೆಯೊಂದಿಗೆ ಭೈರವಸ್ವಾಮಿ ಅಂತರ್ಧಾನನಾದನು.

ಈ ಸ್ವಾಮಿಯನ್ನು ಕುರಿತು ಜಯಶ್ರೀಗೆ ಈ ಮೊದಲೇ ವಿಘ್ನೇಶ್ವರನು ಕನಸಿನಲ್ಲಿ ಹೇಳಿದ್ದನು. ಅವಳು ತನ್ನ ಸ್ವಪ್ನ ಪುರುಷನನ್ನು ಹುಡುಕುತ್ತಾ ಅರಣ್ಯದಲ್ಲಿ ಸುತ್ತುತ್ತಿದ್ದಳು. ಅವಳ ಕಲ್ಯಾಣದ ಮುಂದಿನ ಕಾರ್ಯಗಳು ಒಂದರ ಮೇಲೊಂದಾಗಿ ನಡೆಯ ತೊಡಗಿತು. ನಾರದನ ಆದೇಶದಂತೆ ಚಕ್ರವರ್ತಿ, ಜಯಶ್ರೀಗೆ ಸ್ವಯಂವರವನ್ನು ಏರ್ಪಡಿಸಿದನು. ರಾಜಾಧಿರಾಜರೆಲ್ಲರೂ ಸುಂದರಾತಿಸುಂದರವಾದ ವೇಷಭೂಷಣ ಅಲಂಕಾರಗಳೊಂದಿಗೆ ಸ್ವಯಂವರ ಮಂಟಪವನ್ನು ಅಲಂಕರಿಸಿದರು. ಇಂದ್ರಾದಿ ದೇವತೆಗಳು ಕೂಡಾ ವೇಷ ಬದಲಾಯಿಸಿಕೊಂಡು ಬಂದಿದ್ದರು. ಭೈರವ ಸ್ವಾಮಿ ಒಬ್ಬ ಕಪ್ಪು ಶಬರ ಯುವಕನ ರೂಪದಲ್ಲಿ, ಬಿಲ್ಲು ಬಾಣಗಳನ್ನು ಧರಿಸಿಕೊಂಡು ದೊಡ್ಡದೊಂದು ಕಪ್ಪು ನಾಯಿಯನ್ನು ತನ್ನೊಂದಿಗೆ ಕರೆದುಕೊಂಡು ಸ್ವಯಂವರ ಮಂಟಪವನ್ನು ಪ್ರವೇಶಿಸಿದನು.

ಅದನ್ನು ನೋಡಿ ರಾಜಾಧಿರಾಜರುಗಳು ಆ ಶಬರ ಯುವಕನನ್ನೂ ನಾಯಿಯನ್ನೂ ಎಗತಾಳೆ ಮಾಡಿ ನಗಾಡಿದರು. ತಮ್ಮ ನಡುವೆ ಕುಳಿತುಕೊಳ್ಳಲು ಅವನಿಗೆ ಆಸನ ಕೊಡಲು ಯಾರೂ ಒಪ್ಪಲಿಲ್ಲ.





ಭೈರವ ಸ್ವಾಮಿ ಸಿಂಹ ದ್ವಾರಕ್ಕೆ ಅಡ್ಡವಾಗಿ, ಎಲ್ಲರನ್ನೂ ಕಾರಾಗೃಹದಲ್ಲಿ ಬಂಧಿಸಿ ಹಾಕಿದ ಹಾಗೆ ತನ್ನ ನಾಯಿಯ ಮೇಲೆ ಕುಳಿತನು. ಆ ಕೂಡಲೇ ಕರಿ ನಾಯಿ ಹೆಬ್ಬುಲಿಯಾಗಿ ಬದಲಾಯಿಸಿ ಭಯಂಕರ ವಾಗಿ ಒಂದು ಗಾಂಧ್ರಿಕೆ ಹಾಕಿತು, ಎಲ್ಲರ ಎದೆಗಳೂ ಜುಮ್ಮೆನ್ನುವ ಹಾಗೆ! ವರಮಾಲೆಯೊಂದಿಗೆ ಸಿದ್ಧ ಳಾಗಿದ್ದ ಜಯಶ್ರೀ ಆತನ ಗುರುತು ಹಿಡಿದು, ಬಿಟ್ಟ ಬಾಣದ ಹಾಗೆ ಅವನ ಬಳಿಗೆ ಹೋಗಿ ಸ್ವಾಮಿಯ ಕೊರಳಿಗೆ ಮಾಲೆ ಹಾಕಿದಳು. ಮರುಕ್ಷಣದಲ್ಲಿ ಸ್ವಾಮಿ ಜಯಶ್ರೀಯನ್ನು ಹುಲಿಯ ಮೇಲೆತ್ತಿ ತನ್ನ ಮುಂದೆ ಕೂಡಿಸಿಕೊಂಡು ಹುಲಿಯ ಬೆನ್ನು ತಟ್ಟಿ ಆಜ್ಞೆ ಮಾಡಿದನು. ಅದನ್ನು ನೋಡಿ, ದೇವತೆ ಗಳಿಗೂ ಅಲ್ಲಿ ಸೇರಿದ ರಾಜರಿಗೂ ಕೋಪ ಬಂದಿತು. ಎಲ್ಲರೂ ಕೂಡಿ ಆಯುಧಗಳನ್ನೆತ್ತಿ ಶಬರ ಯುವಕನ ಮೇಲೆ ಮುಗಿಬಿದ್ದರು. ಭೈರವ ಸ್ವಾಮಿ ಬಿಲ್ಲಂಬು ಗಳೊಂದಿಗೆ ತನ್ನ ಕೈ ಚಳಕಕ್ಕೆ ತೊಡಗಿದನು.

ಆತನ ಬಾಣ ಪ್ರಯೋಗ ಪರಂಪರೆಗಳ ವೇಗ ದಿಂದ ದೇವತೆಗಳೇ ಚೆಲ್ಲಾ ಚೆದರಾಗಿ ಹೋದಮೇಲೆ ಉಳಿದವರ ಸಂಗತಿ ಹೇಳಬೇಕೆ? ಯಾವ ಆಯುಧ ಗಳೂ ಅವನ ಶರೀರವನ್ನು ತಾಗಲಿಲ್ಲ. ಇಂದ್ರನ ವಜ್ರಾಯುಧವೂ ಸಪ್ಪಗಾಯಿತು. ಆಗ ಸ್ವಾಮಿ ತನ್ನ ನಿಜರೂಪದಿಂದ ಹರಿಹರ ಸ್ವಾಮಿಯಾಗಿ ಸಾಕ್ಷಾತ್ಕರಿಸಿದನು. ಅದನ್ನು ನೋಡಿ ದೇವತೆಗಳು ಕೂಡಾ "ಶರಣಂ ಸ್ವಾಮಿ!" ಎಂದು ಕೈ ಜೋಡಿಸಿ, ಅವನತಶಿರರಾದರು.

ಅನಂತರ ಎಲ್ಲಾ ಶಾಂತವಾಗಿ ಜಯಶ್ರೀ ಸ್ವಾಮಿ ಯರ ವಿವಾಹವು ದೇವತೆಗಳ ನಡುವೆ ಅತಿ ವೈಭವ ದಿಂದ ನಡೆಯಿತು. ಎಲ್ಲಾ ಆದ ಮೇಲೆ ಸ್ವಾಮಿ ಜಯಶ್ರೀಯೊಂದಿಗೆ ನಿಜ ನಿವಾಸಕ್ಕೆ ಹೊರಟು ಹೋದನು.

* * *

ಹಿಂದೆ ತ್ರೇತಾ ಯುಗದ ಕಾಲದಲ್ಲಿ ಆರ್ಯಾವರ್ತ ದೊಳಗೆ ಕೋಸಲ, ಕೇಕಯ, ವಸುಮಿತ್ರರೆಂಬ ಮೂವರು ಮಹಾರಾಜರು ಆಪ್ತ ಮಿತ್ರರಾಗಿದ್ದರು. ಕೋಸಲನಿಗೆ ಕೌಸಲ್ಯೆ, ಕೇಕಯನಿಗೆ ಕೈಕೇಯಿ, ವಸು ಮಿತ್ರನಿಗೆ ಸುಮಿತ್ರ ಎಂಬ ಹೆಸರಿನ ಕುಮಾರಿಯ ರಿದ್ದರು. ಅಯೋಧ್ಯೆಯನ್ನು ಪಾಲಿಸುವ ದಶರಥ ಕುಮಾರನಿಗೆ ತಮ್ಮ ಕುಮಾರಿಯರನ್ನು ಕೊಟ್ಟು ಮದುವೆ ಮಾಡಬೇಕೆಂದು ಮೂವರು ರಾಜ ರೊಳಗೂ ಏಕಾಭಿಪ್ರಾಯ ಉಂಟಾಯಿತು. ದಶರಥನೂ ತನ್ನ ಅಂಗೀಕಾರವನ್ನು ತಿಳಿಸಿದನು.

ಮೂವರು ರಾಜರೂ ಜೈಮಿನಿ ಮಹರ್ಷಿಯಿಂದ ವಿವಾಹಕ್ಕೆ ಮುಹೂರ್ತವಿಡಿಸಿದರು. ಜೈಮಿನಿ ಒಂದು ಮುಹೂರ್ತವನ್ನು ಆರಿಸಿ ಹೇಳಿ, "ನಾನು ಇಟ್ಟ ಈ ಮುಹೂರ್ತದ ಬಲ ಎಂತಹುದೆಂದರೆ, ವಿಘ್ನೇಶ್ವರನ ಸಾಕ್ಷಿಯಾಗಿ ವಿಘ್ನಗಳು ಬಂದರೂ ಸಹಾ ಪರಿಹರಿಸಿಕೊಂಡು ದಶರಥನೊಂದಿಗೆ ವಿವಾಹ



ವಾಗಿ ತೀರುತ್ತದೆ ! ನಾನು ಹೇಳಿದಂತೆ ವಿವಾಹ ನಡೆಯುವ ಮೊದಲು ರಾಕ್ಷಸ ಗಂಡವು ಅಡ್ಡ ಬರುತ್ತದೆ. ಮೂವರು ಕುಮಾರಿಯರನ್ನೂ ಜಾಗರೂಕತೆಯಿಂದ ನೋಡಿಕೊಳ್ಳಬೇಕಾದುದು ಮುಖ್ಯ" ಎಂದು ಹೇಳಿದನು.

ಅದನ್ನು ಕೇಳಿ ಮೂವರು ರಾಜರೂ ತಮ್ಮ ಕುಮಾರಿಯರನ್ನು ದೊಡ್ಡದೊಂದು ಪೆಟ್ಟಿಗೆಯೊಳಗೆ ಅಡಗಿಸಿಟ್ಟರು.

ಆಗ ತ್ರಿಕಾಲಜ್ಞಾನಿ ನಾರದನು ರಾವಣನ ಬಳಿಗೆ ಹೋಗಿ " ನೋಡಿದೆಯಾ ಲಂಕೇಶ್ವರಾ ! ದಶರಥನಿಗೆ ವಿವಾಹ ನಿಶ್ಚವಾಯಿತು. ಅವನ ಕುಮಾರನೇ ನಿನ್ನನ್ನು ಹತಮಾಡುವವನಾಗುತ್ತಾನೆ. ಯಾವುದಕ್ಕೂ ಎಚ್ಚರಿಕೆಯಾಗಿರು !" ಎಂದು ಎಚ್ಚರಿಕೆ ಕೊಟ್ಟು ಹೊರಟುಹೋದನು.

ರಾವಣನು ಆ ಮೂವರು ರಾಜಕುಮಾರಿಯರನ್ನೂ ಎತ್ತಿಕೊಂಡು ಬರುವಂತೆ ಹೇಳಿ ಮಹೋದರನೆಂಬ ಬಲು ದೊಡ್ಡ ರಾಕ್ಷಸನನ್ನು ಕಳುಹಿಸಿದನು. ಮಹೋದರನು ಅಲ್ಲಿಗೆ ಹೋಗಿ ಪೆಟ್ಟಿಗೆಯೊಳಗೆ ಆ ಕನ್ಯೆಯರಿರುವುದನ್ನು ತಿಳಿದು, ಆ ಪೆಟ್ಟಿಗೆಯನ್ನೇ ನುಂಗಿ ಆಕಾಶಮಾರ್ಗದಲ್ಲಿ ಹಿಂದಿರುಗಿದನು. ಅವನು ಸಮುದ್ರದ ಮೇಲಿಂದಾಗಿ ಲಂಕೆಗೆ ಸಾಗುತ್ತಿದ್ದಾಗ, ಅವನಿಗೆ ತಾಳಲಾಗದಷ್ಟು ಹೊಟ್ಟೇ ನೋವು ಶುರುವಾಯಿತು. ಕೂಡಲೇ ಹೊಟ್ಟೆಯನ್ನು ಹಿಚಿಕಿ, ನುಂಗಿದ ಪೆಟ್ಟಿಗೆಯನ್ನು ಹೊರಗೆ ಕಕ್ಕಿಬಿಟ್ಟನು.

ಆ ಪೆಟ್ಟಿಗೆ ಸಮುದ್ರದಲ್ಲಿ ಬಿದ್ದು ತೆರೆಗಳಲ್ಲಿ ಕುಣಿಯುತ್ತಾ ಹೋಗುತ್ತಿದ್ದಿತು. ದಶರಥನು ಸಮುದ್ರದ ಮೇಲೆ ಎಲ್ಲಿಗೋ ಹೋಗಿ ನೌಕೆಯಲ್ಲಿ ಹಿಂದಿರುಗುತ್ತಿದ್ದನು. ವಿವಾಹದ ಮುಹೂರ್ತಕ್ಕೆ ಸರಿಯಾಗಿ ತಾನು ಊರಿಗೆ ಸೇರುವೆನೋ ಇಲ್ಲವೋ ಎಂಬ ಆತುರದಲ್ಲಿ ಅವನಿದ್ದನು. ಅವನು ಸಮುದ್ರವನ್ನು ನೋಡುತ್ತ ನಾವಿಕರನ್ನು ಅವಸರಪಡಿಸುತ್ತಿದ್ದಾಗ, ನೌಕೆಯ ಕಡೆಗೇ ಹೊಡೆದುಕೊಂಡು ಬರುವ ದೊಡ್ಡ ಪೆಟ್ಟಿಗೆಯನ್ನು ನೋಡಿದನು. ಅಷ್ಟರಲ್ಲಿ ಆ ಪೆಟ್ಟಿಗೆ ನೌಕೆಗೆ ಅಪ್ಪಳಿಸಿ, ಅದರ ಮೇಲ್ಮುಚ್ಚಳವು ಕಳಚಿಬಿತ್ತು, ಒಳಗಿದ್ದ ಮೂವರು ಕುಮಾರಿಯರನ್ನು ನೋಡಿದ ಕೂಡಲೇ, ತಾನು ವಿವಾಹವಾಗಲಿರುವ ಕನ್ಯೆಯರು ಇವರೇ ಎಂದು ದಶರಥನಿಗೆ ಗೊತ್ತಾಯಿತು. ಜೈಮಿನಿ ಇಟ್ಟ ಮುಹೂರ್ತವೂ ಆಗಲೇ ಬಂದೂ ಬಿಟ್ಟಿತ್ತು. ಅಷ್ಟರೊಳಗೆ ನಾವಿಕರು ಆ ಮೂವರು ಕುಮಾರಿಯರನ್ನೂ ನೌಕೆಗೆ ಎತ್ತಿಕೊಂಡಿದ್ದರು. ಇದ್ದಕ್ಕಿದ್ದ ಹಾಗೆ ವಿಘ್ನೇಶ್ವರನು ಅಲ್ಲಿ ಪ್ರತ್ಯಕ್ಷನಾದನು. ದಶರಥನ ವಿವಾಹವು ಆ ಕುಮಾರಿಯರೊಂದಿಗೆ ವಿಘ್ನೇಶ್ವರನ ಪೌರೋಹಿತ್ಯದಲ್ಲೇ ನಡೆಯಿತು. ಆಮೇಲೆ ವಿಘ್ನೇಶ್ವರನು ಅಂತರ್ಧಾನನಾದನು. ದಶರಥನು ಮೂವರು ವಧುಗಳೊಂದಿಗೆ ಸಂತೋಷವಾಗಿ ಸ್ವದೇಶವನ್ನು ಸೇರಿದನು. ಮದುವೆಯಾಗಿ ಬಹಳಕಾಲದವರೆಗೆ ಮಕ್ಕಳಿಲ್ಲದೆ ಕಳೆದ ಮೇಲೆ,



ದಶರಥನಿಗೆ ನಾಲ್ಕುಮಂದಿ ಕುಮಾರರು ಹುಟ್ಟಿದರು. ಹಿರಿಯನಾದ ರಾಮನು ಕೈಕೇಯಿಯ ಕಾರಣದಿಂದ ಪತ್ನಿ ಸೀತೆ ಮತ್ತು ತಮ್ಮ ಲಕ್ಷ್ಮಣನೊಂದಿಗೆ ಅರಣ್ಯವಾಸಕ್ಕೆ ಹೋದನು. ರಾವಣನು ಸೀತೆಯನ್ನು ಲಂಕೆಗೆ ಅಪಹರಿಸಿಕೊಂಡು ಹೋದನು. ರಾಮನು ಹನುಮಂತ, ಸುಗ್ರೀವ ಮೊದಲಾದ ವಾನರರ ಸಹಕಾರದಿಂದ ಲಂಕೆಯನ್ನು ಮುತ್ತಿಗೆ ಹಾಕಿ ರಾವಣನನ್ನು ಸಂಹಾರಮಾಡಿದನು. ಆಮೇಲೆ ಸೀತೆ ಯೊಂದಿಗೆ ಪುಷ್ಪಕ ವಿಮಾನದಲ್ಲಿ ಹೊರಟು, ತೆಂಕು ಸಮುದ್ರತೀರದಲ್ಲಿ ನಿಂತು, ಸೇತುವೆ ಕಟ್ಟಲು ಅನುಮತಿ ಕೊಟ್ಟ ಆ ಸಮುದ್ರ ತೀರದಲ್ಲಿ ಶಿವಪೂಜೆ ಮಾಡಿ, ಅಯೋಧ್ಯೆಗೆ ಹೋಗಬೇಕೆಂದು ರಾಮನು ನಿಶ್ಚಯಿಸಿದನು.

ರಾಮನು ಹನುಮಂತನನ್ನು ಕರೆದು, ಪ್ರತಿಷ್ಠೆಗೆ ತಕ್ಕುದಾದ ಒಂದು ಶಿವಲಿಂಗವನ್ನು ತರುವಂತೆ ಹೇಳಿ ಅವನನ್ನು ಕೈಲಾಸಕ್ಕೆ ಕಳುಹಿಸಿದನು. ಹನುಮಂತನು ಮನೋವೇಗದಿಂದ ಕೈಲಾಸವನ್ನು ಸೇರಿ, ಅಲ್ಲಿರುವ ಲಿಂಗಗಳಲ್ಲಿ, ದೊಡ್ಡ ಲಿಂಗವನ್ನು ನೋಡಿ ಎರಡು ಕೈಗಳಿಂದಲೂ ಎತ್ತಲು ಪ್ರಯತ್ನಿಸಿದನು. ಆ ಲಿಂಗವು ಸ್ವಲ್ಪವೂ ಕದಲಲಿಲ್ಲ. ಅದಕ್ಕಿಂತ ಚಿಕ್ಕಲಿಂಗವನ್ನು ಕದಲಿಸಲು ನೋಡಿದನು. ಅದು ಕೂಡಾ ಕದಲಲಿಲ್ಲ. ಕಡೆಗೆ ಎಲ್ಲದಕ್ಕಿಂತ ಚಿಕ್ಕಲಿಂಗವನ್ನು ಕೂಡಾ ಕದಲಿಸಲು ಹನುಮಂತನಿಂದಾಗಲಿಲ್ಲ.

ಸುಮ್ಮನೆ ಕಾಲ ಹರಣ ವಾಗುವುದನ್ನು ನೋಡಿ. ಹನುಮಂತನು ತನ್ನ ಅಸಮರ್ಥತೆಗಾಗಿ ಚಿಂತಿಸಿಕೊಂಡಿರುವಾಗ, ಒಬ್ಬ ಹುಡುಗನು ಗುಡುಗುಡು ಓಡುತ್ತ ಅವನ ಬಳಿಗೆ ಬಂದನು. "ಯಾರೋ ನೀನು? ನೋಡಿದರೆ ನಮ್ಮ ಹನುಮಂತನ ಹಾಗಿದ್ದರೂ ನೀನು ಅವನಲ್ಲ!" ಎಂದನು ಆ ಹುಡುಗ.

"ನಾನು ಹನುಮಂತನೇ ಅಪ್ಪಾ! ಒಂದು ಶಿವಲಿಂಗವನ್ನು ತಾರೆಂದು ಹೇಳಿ ಶ್ರೀರಾಮನು ನನ್ನನ್ನು ಕಳುಹಿಸಿದನು. ಹೌದು, ನೀನಾರೋ ಹುಡುಗಾ?" ಎಂದು ಕೇಳಿದನು ಹನುಮಂತ.

"ಇಲ್ಲಿರುವ ಲಿಂಗಗಳನ್ನು ಯಾರೂ ಎತ್ತಿಕೊಂಡು ಹೋಗದಂತೆ ನನ್ನನ್ನು ಕಾವಲಿಗಿಟ್ಟಿದ್ದಾರೆ. ನೀನು ಹನುಮಂತನೆಂದು ಹೇಳುವುದರಿಂದ, ಒಂದು ವಿಷಯ ಕೇಳುತ್ತೇನೆ. ಹನುಮಂತನು ಶಿವನ ಅವತಾರವೆಂದೂ, ಅವನಿಗೆ ಐದು ಮುಖಗಳಿವೆಯೆಂದೂ ಕೇಳಿದ್ದೇನೆ. ನಿನ್ನ ಪಂಚಮುಖಗಳನ್ನು ತೋರಿಸು ನೋಡುವಾ" ಎಂದನು ಹುಡುಗ.

"ನೋಡಪ್ಪ!" ಎಂದು ಹನುಮಂತನು ಗರುಡ, ವರಾಹ, ಸಿಂಹ, ಅಶ್ವಗಳ ಮುಖಗಳೊಂದಿಗೆ ಮಹೋನ್ನತನಾಗಿ ಬೆಳೆದು ಪಂಚಮುಖಾಂಜನೇಯನಾಗಿ ನಿಂತು, ಹುಡುಗನನ್ನು ನೋಡಿ, "ವಿಘ್ನೇಶ್ವರಾ! ಇನ್ನು ನಿನ್ನ ಸರದಿ!" ಎಂದನು.

ಬಾಲನ ರೂಪದಲ್ಲಿದ್ದ ವಿಘ್ನೇಶ್ವರನು ಐದು ತಲೆಗಳೊಂದಿಗೆ ಹನುಮಂತನ ಸಮಾನ ಎತ್ತರಕ್ಕೆ

ಬೆಳೆದು ತನ್ನ ವಿಶ್ವರೂಪವನ್ನು ತೋರಿಸಿದನು. ಹನುಮಂತನು ಪಂಚಮುಖಗಳ ವಿಘ್ನೇಶ್ವರನಿಗೆ ನಮಸ್ಕಾರಮಾಡಿ, "ನೀನು ಬಾಲನ ರೂಪದಲ್ಲಿರುವಾಗಲೇ ನಿನ್ನ ಗುರುತು ಹಿಡಿದೆನು. ಶಿವಲಿಂಗಗಳು ಕದಲದಂತೆ ಮಾಡಿದವನು ನೀನು ತಾನೆ? ಈಗ ನೀನೇ ಒಂದು ಲಿಂಗವನ್ನು ಪ್ರಸಾದಿಸು" ಎಂದನು.

"ಹನುಮಾ! ನಿನ್ನ ಪಂಚಮುಖರೂಪವನ್ನು ನೋಡಬೇಕೆಂತಲೇ ಹೀಗೆಮಾಡಿದೆ. ನೀನು ಶಿವಾಂಶದಿಂದ ಹುಟ್ಟಿದವನು. ನಿನಗೆ ಅಡ್ಡಿ ಏನಿದೆ? ಆದರೂ ನೀನಾಗಿ ಕೇಳಿದುದರಿಂದ ವಿಶೇಷಾಂಶಗಳಿರುವ ಶಿವಲಿಂಗವನ್ನೇ ನಿನಗಾಗಿ ಆರಿಸಿಟ್ಟಿದ್ದೇನೆ. ತೆಗೆದುಕೊಂಡು ಹೋಗು" ಎಂದು ಹೇಳಿ ವಿನಾಯಕನು ಹನುಮಂತನ ಜೋಡಿಸಿದ ಅಂಗೈಯಲ್ಲಿ ದೊಡ್ಡದೊಂದು ಜ್ಯೋತಿರ್ಲಿಂಗವನ್ನು ಇರಿಸಿದನು.

ಹನುಮಂತನು ಆ ಜ್ಯೋತಿರ್ಲಿಂಗವನ್ನು ಅಂಜಲಿಯಲ್ಲಿ ಹಿಡಿದುಕೊಂಡು, ಸಹಜರೂಪದಿಂದ ಆಕಾಶದಲ್ಲಿ ಹಾರುತ್ತಾ ರಾಮನ ಬಳಿಗೆ ಬಂದನು. ಆಗಲೇ ಕಾಲಮೀರಿ ಹೋಗಿತ್ತು.

ಲಿಂಗಸ್ಥಾಪನೆಗೆ ನಿರ್ಣಯಿಸಿದ ಕಾಲವು ಮೀರಿ ಹೋಗದಂತೆ ಸೀತಾದೇವಿ ಮರಳಿನಿಂದಲೇ ಶಿವಲಿಂಗವನ್ನು ಮಾಡಿಬಿಟ್ಟಿದ್ದಳು. ರಾಮನು ಅದಕ್ಕೆ ಅಭಿಷೇಕಮಾಡಿ ಪೂಜೆಗೆ ಉಪಕ್ರಮಿಸುವಾಗ ಹನುಮಂತನು ಜ್ಯೋತಿರ್ಲಿಂಗದೊಂದಿಗೆ ಅಲ್ಲಿಗೆ ಬಂದನು. ಹನುಮಂತನು ಅಲ್ಲಿ ನಡೆಯುವುದನ್ನು ನೋಡಿ, ಅಲ್ಲಿರುವ ಸೈಕತಲಿಂಗವನ್ನು ಬಾಲದಿಂದ ಸುತ್ತಿ ಎತ್ತಿ ಹಾಕಲು ನೋಡಿದನು. ಆದರೆ ಆ ಮರಳಿನ ಲಿಂಗಕ್ಕೆ ಏನೂ ಆಗಲಿಲ್ಲ. ಹನುಮಂತನು ಎಷ್ಟು ಬಲವಾಗಿ ಅದನ್ನು ತೆಗೆಯಲು ನೋಡಿದರೂ ಬಾಲಕ್ಕೆ ನೋವಾಯಿತೇ ಹೊರತು ಲಿಂಗಕ್ಕೆ ಏನೂ ಆಗಲಿಲ್ಲ.

ಆಗ ರಾಮನು ಹನುಮಂತನನ್ನು ಶಾಂತಪಡಿಸಿ, "ಹನುಮಾ! ಬುದ್ಧಿವಂತರು ಕೂಡಾ ಒಂದೊಂದು ಸಾರಿ ತಪ್ಪುಮಾಡುವುದುಂಟು. ಎಲ್ಲಾ ಬಲ್ಲ ನೀನೇ ತಿಳಿಯದವನಂತೆ ವರ್ತಿಸುವೆಯಲ್ಲ? ಸೈಕತಲಿಂಗವಾದರೂ ಅದು ಶಿವನ ಗುರುತು ತಾನೇ? ಶಿವನೊಂದಿಗೆ ಆಟವಾಡಲು ಯಾರಿಂದಾದೀತು? ಈಗೇನಾಯಿತು? ನೀನು ತಂದ ಲಿಂಗವನ್ನೂ ಈ ಸೈಕತಲಿಂಗದ ಪಕ್ಕದಲ್ಲೇ ಪ್ರತಿಷ್ಠಿಸಿ ಪೂಜಿಸಿದರಾಯಿತು" ಎಂದನು.

ಹನುಮಂತನು ತಾನು ತಂದ ಲಿಂಗವನ್ನು ಪಕ್ಕದಲ್ಲಿಟ್ಟು ಸಾಷ್ಟಾಂಗ ನಮಸ್ಕಾರಮಾಡಿದನು. ರಾಮನು ಎರಡು ಲಿಂಗಗಳಿಗೂ ಪೂಜೆ ಮಾಡಿ, ಎಲ್ಲರೊಂದಿಗೆ ಪುಷ್ಪಕವನ್ನೇರಿ ಅಯೋಧ್ಯೆಗೆ ಹೊರಟನು.






## ೨

ಹಸನನು ಬೋದ ತಪ್ಪಿ ಬಿದ್ದಕೂಡಲೇ, "ಹಾಗೆ ಬೀಳು ಮಗನೆ! ಇನ್ನು ನನ್ನ ಕೈಯಿಂದ ತಪ್ಪಿ ಹೋಗಲಾರೆ!" ಎಂದು ಆ ವೃದ್ಧನು ತಾನು ಕುಳಿತಲ್ಲಿಂದ ಎದ್ದು, ಹಸನ್ನನ ಕಾಲುಗಳನ್ನು ಮಡಚಿ, ಎದೆಯೊಂದಿಗೆ ಸೇರಿಸಿ ಬಿಗಿದು ಕಟ್ಟಿದನು. ಆಮೇಲೆ ಬೇಗಬೇಗನೆ ಅಲ್ಲಿದ್ದ ಒಂದು ಪೆಟ್ಟಿಗೆಯನ್ನು ತೆರೆದು ಅದರೊಳಗಿದ್ದ ಬಟ್ಟೆಗಳನ್ನು ತೆಗೆತೆಗೆದು ಬಿಸುಟು ಖಾಲೀ ಮಾಡಿದನು.

ಅನಂತರ ಆ ದುಷ್ಟನು ಹಸನ್ನನ್ನು ಆ ಪೆಟ್ಟಿಗೆಯೊಳಗೆ ಇಟ್ಟು ಮನೆಯಲ್ಲಿದ್ದ ಹಣವನ್ನೆಲ್ಲಾ ಹುಡುಕಿ ಎತ್ತಿಕೊಂಡು ಹೊರಗೆ ಹೋಗಿ, ಒಬ್ಬ ಆಳಿನ ಹತ್ತಿರ ಕೂಲಿಯ ವಿಷಯ ಮಾತಾಡಿ, ಅವನಿಂದ ಪೆಟ್ಟಿಗೆಯನ್ನು ಹೊರಿಸಿಕೊಂಡು ನೆಟ್ಟಗೆ ಸಮುದ್ರದ ಬದಿಯ ರೇವಿಗೆ ಹೋದನು. ಅಲ್ಲಿ ಒಂದು ಹಡಗು ಹೊರಡಲು ಸಿದ್ಧವಾಗಿದ್ದಿತು. ಹಡಗಿನ ಸರಂಗನು ಬೇಗ ಬೇಗನೆ ಬರುವ ವೃದ್ಧನನ್ನು ನೋಡಿದಕೂಡಲೇ ಬೇಗ ಹತ್ತಲು ಹೇಳಿ, ಆಳುಗಳಿಂದ ಅವನ ಪೆಟ್ಟಿಗೆಯನ್ನೂ ಹಡಗಿನೊಳಗಿಡಿಸಿ, ಲಂಗರು ಎತ್ತಿಸಿ ಹಡಗನ್ನು ಸಮುದ್ರದಲ್ಲಿ ಸಾಗಿಸಿದನು.

ಸ್ವಲ್ಪ ಹೊತ್ತಿನ ಮೇಲೆ ಹಸನನ ತಾಯಿ ಮನೆಗೆ ಬಂದು ನೋಡಿದಾಗ ಹಸನ್ ಎಲ್ಲಿಯೂ ಕಾಣಲಿಲ್ಲ. ಒಂದು ದೊಡ್ಡ ಪೆಟ್ಟಿಗೆಯೂ ಇಲ್ಲ. ಮುಂಚಿನ ದಿನ ಹಸನ್ ಬಂಗಾರವನ್ನು ಮಾರಿ ತಂದಿದ್ದ ಹಣವೂ ಕಾಣೆಯಾಗಿತ್ತು. ಪೆಟ್ಟಿಗೆಯಲ್ಲಿದ್ದ ಬಟ್ಟೆಗಳೆಲ್ಲಾ ಚೆಲ್ಲಾ ಚೆದರಾಗಿ ಬಿದ್ದಿದ್ದುವು. ಮನೆಯ ಬಾಗಿಲು ಢಾಳಾಗಿ ತೆರೆದೇ ಇತ್ತು! ಇನ್ನೇನಿದೆ? ಅವಳು ಮನೆಯೇ ಮುಗುಚಿ ಬಿದ್ದ ಹಾಗೆ ಭೋರಿಡುತ್ತಾ, ತಲೆ ಬಡೆದುಕೊಂಡು ಹುಚ್ಚಿಯ ಹಾಗೆ ತನ್ನ ಬಟ್ಟೆಗಳನ್ನು ಹರಿದಾಡಿಕೊಂಡು ಗೋಳಿಟ್ಟಳು. ತಾನು ಹೆದರಿದ ಹಾಗೆಯೇ ಆಯಿತೆಂದು ಹಲುಬಿದಳು, ಇನ್ನು ಜನ್ಮದಲ್ಲಿ ತನ್ನ ಮಗನನ್ನು ಕಾಣಲಾರೆನೆಂದು ದುಃಖದ ಹುಚ್ಚಿನಲ್ಲಿರುವ ಅವಳಿಗೆ ಸಮಾಧಾನ ಹೇಳುವ ಶಕ್ತಿ ನೆರೆಹೊರೆಯವರಾರಿಗೂ ಇಲ್ಲದೆ ಹೋಯಿತು. ಅವಳು ತನ್ನ ಮನೆಯ ನಡುವಿನಲ್ಲಿ ಮಗನ ಹೆಸರಿನಲ್ಲಿ ಚಿಕ್ಕದೊಂದು ಗೋರಿಯನ್ನು



ಯೊಳಗಿನಿಂದ ಹಸನ್ನನ್ನು ಹೊರಗೆ ಹಾಕಿ, ಅವನಿಗೆ ಬೋದ ಬರುವಂತೆ, ಯಾವುದೋ ಔಷಧದ ವಾಸನೆಯನ್ನು ಅವನ ಮೂಗಿಗೆ ಹಿಡಿದನು. ಸ್ವಲ್ಪ ಹೊತ್ತಿನಲ್ಲಿ ಹಸನ್ ಕಣ್ಣು ಬಿಡಿಸಿ ಆಚೀಚೆ ನೋಡುತ್ತ, ತಾನು ಸಮುದ್ರದ ಬದಿಯಲ್ಲಿರುವುದನ್ನು ತಿಳಿದನು. ಅದು ತನ್ನ ದೇಶವಲ್ಲವೆಂದೂ ಗೊತ್ತಾಯಿತು. ಏಕೆಂದರೆ ಈ ಸಮುದ್ರದ ತೀರದಲ್ಲಿ ಕಪ್ಪು, ಬಿಳುಪು, ಹಸುರು, ಕೆಂಪು ಬಣ್ಣಗಳ ಹರಳುಗಳು ತೀರದುದ್ದಕ್ಕೂ ಅಲ್ಲಲ್ಲಿ ಹರಡಿರುವುದು ಕಾಣುತ್ತಿತ್ತು. ಅವನು ಆಶ್ಚರ್ಯದಿಂದ ಎದ್ದು ನಿಂತು, ತನ್ನ ಹಿಂದೆ ಕಲ್ಲಿನ ಮೇಲೆ ಕುಳಿತು, ತನ್ನನ್ನೇ ನೋಡುತ್ತಿರುವ ಪರ್ಷಿಯನ್ ಮುದುಕನನ್ನು ನೋಡಿದನು. ಅವನೇ ತನಗೆ ಮೋಸ ಮಾಡಿ ಇಲ್ಲಿಗೆ ತಂದಿದ್ದಾನೆಂದೂ, ತಾಯಿ ಹೇಳಿದ ಮಾತು ಅಕ್ಷರಶಃ ನಿಜವಾಯಿತೆಂದೂ ತಿಳಿದುಕೊಂಡನು ಹಸನ್. ಕೋಪ ಬಂದರೂ ನುಂಗಿಕೊಂಡನು. ಅವನು ಆ ಮುದುಕನ ಹತ್ತಿರ ಹೋಗಿ, "ಅಜ್ಜಯ್ಯಾ, ಇವೆಲ್ಲಾ ಏನು ? ಸ್ವಪ್ನವಲ್ಲವಷ್ಟೆ ? ನೀವು ನಮ್ಮ ಮನೆಯ ಉಪ್ಪು ತಿಂದವರು ತಾನೇ ?" ಎಂದನು.

ಮುದುಕನು ಗಟ್ಟಿಯಾಗಿ ನಗೆಯನ್ನು ಹಾರಿಸಿ. "ಅಗ್ನಿಯನ್ನು ಪೂಜಿಸುವ ಈ ಬೆಹ್ರಾಂಗೆ ಉಪ್ಪು ತಿಂದ ನಿರ್ಬಂಧವೇನೂ ಇಲ್ಲಪ್ಪಾ. ನೀನು ಕಾಣುವುದು ಸ್ವಪ್ನವೂ ಅಲ್ಲ. ನಿನ್ನಂಥ ಪ್ರಾಯದ ಯುವಕರು ಒಂಬೈನೂರ ತೊಂಬತ್ತೊಂಬತ್ತು ಮಂದಿಯನ್ನು ಬಲಿ ಕೊಟ್ಟಿದ್ದೇನೆ. ನೀನು ಸಾವಿರದವನು ನನ್ನ ಕೈಗೆ ಸಿಕ್ಕಿರುವಿ. ಇನ್ನು ತಪ್ಪಿಸಿಕೊಳ್ಳಲಾರೆ ! ನಿನ್ನ ದೇವರನ್ನೆಲ್ಲಾ ಬಿಟ್ಟು ನನ್ನ ಹಾಗೇ ಅಗ್ನಿಯನ್ನು ಅರ್ಚಿಸು," ಎಂದನು.

ಅವನ ಮಾತು ಕೇಳಿ ಹಸನ್ ಕೋಪದಿಂದ ಉರಿಯುತ್ತ, "ನೀಚಾ ! ಏನು ಬೊಗಳುವೆ ? ಏನು ಅರ್ಥ ನಿನ್ನ ಮಾತಿಗೆ ?" ಎಂದು ಗಟ್ಟಿಯಾಗಿ

ಕಟ್ಟಿಸಿ, ಹಗಲೂ ರಾತ್ರಿಯೂ ಅದರ ಹತ್ತಿರವೇ ಕಾವಲು ಕುಳಿತು ಅಳುತ್ತಾ ಕಾಲ ಕಳೆಯುತ್ತಿದ್ದಳು. ಕಾಲಕಳೆದಂತೆ ಸೊರಗಿ ಹೋಗುತ್ತಿದ್ದಳು.

ಹಸನ್ನನ್ನು ಮಾಯವಮಾಡಿ ಹಿಡಿದುಕೊಂಡು ಹೋದ ಪರ್ಷಿಯನ್ನನು ಭಯಂಕರನಾದ ಮಾಂತ್ರಿಕನಾಗಿದ್ದನು. ಅವನ ಹೆಸರು ಬೆಹ್ರಾಂ. ಅವನು ತನ್ನ ಮಾಯಾ ವಿದ್ಯೆಗಳಿಂದ ಎಷ್ಟೋ ಯುವಕರನ್ನು ಬಲಿಕೊಟ್ಟಿದ್ದನು. ಈಸಾರಿ ಅವನ ಕೈಗೆ ಹಸನ್ ಸಿಕ್ಕಿಬಿದ್ದಿದ್ದನು.

ಸಮುದ್ರ ಪ್ರಯಾಣದ ಸಮಯದಲ್ಲಿ ಬೆಹ್ರಾಂ ಹಸನ್ನನ್ನು ಪೆಟ್ಟಿಗೆಯೊಳಗೇ ಇರಿಸಿ, ಮಯಕದ ಮದ್ದು ಬೆರೆಸಿದ ಆಹಾರವನ್ನು ತಿನಿಸುತ್ತಾ ಬಂದನು. ಕೆಲವು ದಿನಗಳ ಮೇಲೆ ಹಡಗು ಯಾವುದೋ ಒಂದು ತೀರವನ್ನು ತಲಪಿತು. ಬೆಹ್ರಾಂ ಪೆಟ್ಟಿಗೆಯೊಂದಿಗೆ ಅಲ್ಲಿ ಇಳಿದ ಮೇಲೆ, ಹಡಗು ಹೊರಟುಹೋಯಿತು. ಆಗ ಆ ಮುದುಕ ಮಂತ್ರವಾದಿ ಬೆಹ್ರಾಂ ಪೆಟ್ಟಿಗೆ

ಕೂಗಿದನು. ಕೂಡಲೇ ಬೆಹ್ರಾಂ ತನ್ನ ಮುಖ ಭಾವವನ್ನು ಬದಲಾಯಿಸಿ, "ನಿನ್ನನ್ನು ಪರೀಕ್ಷೆ ಮಾಡಲಿಕ್ಕಾಗಿಯೇ ಹಾಗೆ ಹೇಳಿದೆನಪ್ಪಾ. ಭೇಷ್ ! ಭೇಷ್ ! ಪರೀಕ್ಷೆಯಲ್ಲಿ ಗೆದ್ದುಬಿಟ್ಟೆ. ಏಕಾಂತ ಪ್ರದೇಶ ದಲ್ಲಿ ನಿನಗೆ ನನ್ನ ವಿದ್ಯೆಯನ್ನು ಉಪದೇಶಮಾಡ ಬೇಕೆಂತಲೇ ಇಲ್ಲಿಗೆ ಕರೆದು ತಂದಿದ್ದೇನೆ. ಅಕೋ, ಅಲ್ಲಿ ಕಾಣುವ ಗುಡ್ಡವನ್ನು ನೋಡಿದಿಯಾ ? ಅದರ ಶಿಖರವು ಮೋಡಕ್ಕಿಂತ ಎತ್ತರವಾಗಿದೆ. ಆದಕ್ಕೇ ಅದನ್ನು ಮೋಡದ ಬೆಟ್ಟ ಅನ್ನುತ್ತಾರೆ. ನಮಗೆ ಬೇಕಾದ ಮೂಲಿಕೆಗಳೆಲ್ಲ ಅದರ ಮೇಲಿವೆ. ನಾವು ಈಗಲೇ ಅಲ್ಲಿಗೆ ಹೋಗಬೇಕು "ಎಂದನು.

ಹಸನನ ಅನುಮಾನವು ಸ್ವಲ್ಪ ತಗ್ಗಿತು. ಅವನು ಗುಡ್ಡವನ್ನು ನೋಡಿ ಬೆಹ್ರಾಂನೊಂದಿಗೆ, "ಆ ಗುಡ್ಡ ಗೋಡೆಯ ಹಾಗೆ ಇದೆಯಲ್ಲ ? ಅದರ ಶಿಖರಕ್ಕೆ ಹತ್ತುವುದು ಹೇಗೆ ? ದಾರಿಯೆಲ್ಲಿದೆ ?" ಎಂದು ಪ್ರಶ್ನೆ ಮಾಡಿದನು.

"ನಮಗೆ ಹತ್ತುವ ಕೆಲಸವೇ ಇಲ್ಲಪ್ಪಾ, ಪಕ್ಷಿಗಳ ಹಾಗೆ ಅಲ್ಲಿಗೆ ಹೋಗಿ ಸೇರುತ್ತೇವೆ. ನೋಡು !" ಎಂದು ಬೆಹ್ರಾಂ ತನ್ನ ಮೈಮೇಲಿನ ಬಟ್ಟೆಯ ಒಳಗಿನಿಂದ ಒಂದು ತಾಮ್ರದ ತಪ್ಪಲೆಯನ್ನು ತೆಗೆದನು.

ಅದರ ಮೇಲೆ ಹುಂಜದ ಚರ್ಮವನ್ನು ಹೊದೆಸಲಾಗಿತ್ತು. ಆ ಚರ್ಮದ ಮೇಲೆ ಏನೋ ಮಂತ್ರದ ಅಕ್ಷರಗಳು ಬರೆದಿರುವಂತೆ ಕಾಣುತ್ತಿತ್ತು. ಹಸನ್ ಬೆರಗಾಗಿ ನೋಡುತ್ತ ನಿಂತನು.

ಬೆಹ್ರಾಂ ಆ ತಪ್ಪಲೆಯ ಮೇಲೆ ಬೆರಳುಗಳನ್ನು ಬಾರಿಸುವಂತೆ ಆಡಿಸುವಾಗ ಸುತ್ತು ಮುತ್ತಲೂ ಧೂಳುಗಳೆದ್ದು ಅವರನ್ನು ಮುಸುಕಿತು, ನೋಡುತ್ತಿದ್ದಂತೆ ಧೂಳುಗಳ ಬದಲಾಗಿ ಕಪ್ಪಗಿನ ರೆಕ್ಕೆಯ ಕುದುರೆಯೊಂದು ಅಲ್ಲಿ ಪ್ರತ್ಯಕ್ಷವಾಯಿತು. ಅದರ ಮೂಗಿನಿಂದ ಜ್ವಾಲೆಗಳು ಹೊರಡುತ್ತಿದ್ದವು. ಬೆಹ್ರಾಂ ಅದರ ಮೇಲೆ ಏರಿ ಕುಳಿತುಕೊಂಡು,



ಹಸನನಿಗೆ ಕೈಕೊಟ್ಟು ಸಹಾಯ ಮಾಡಿ ಕುದುರೆಯ ಮೇಲೆ ತನ್ನ ಹಿಂದೆ ಕೂಡಿಸಿಕೊಂಡನು. ಕುರು ಕ್ಷಣ ದಲ್ಲಿ ಆ ಕುದುರೆ ರೆಕ್ಕೆಗಳನ್ನು ಆಡಿಸಿ ಜೊಂಯ್ಯನೆ ಆಕಾಶದ ಮೇಲೆದ್ದು ಕಣ್ಣು ಮುಚ್ಚಿ ಬಿಡಿಸುವುದ ರೊಳಗೆ ಆ ಗುಡ್ಡದ ಶಿಖರದ ಮೇಲೆ ಎರಗಿತು. ಬೆಹ್ರಾಂ ಮತ್ತು ಹಸನ್ ಇಳಿದ ಕೂಡಲೇ ಆ ಕುದುರೆ ಮಾಯವಾಗಿ ಹೋಯಿತು.

ಮೋಡಗಳಾಚೆ ಆಕಾಶದ ಮೇಲಿನ ಆ ಪ್ರದೇಶವನ್ನು ನೋಡಿದ ಕೂಡಲೇ ಹಸನನಿಗೆ ಮತ್ತೆ ಅನುಮಾನವೆದ್ದಿತು. ಅಲ್ಲೆಲ್ಲಿಯೂ ಒಂದು ಹುಲ್ಲು ಮೂಲಿಕೆಯೂ ಇಲ್ಲದ ಖಾಲೀ ಜಾಗ. ಅವನು ಬೆಹ್ರಾಂನನ್ನು ದುರುಗುಟ್ಟಿ ನೋಡಿದನು. ಆಗ ಬೆಹ್ರಾಂ ಅವನೊಂದಿಗೆ, "ಹುಲುಹುಡುಗಾ ! ಈಗ ನಿನ್ನನ್ನು ರಕ್ಷಿಸುವವರು ಇಲ್ಲಿ ಯಾರೂ ಇಲ್ಲ. ಇನ್ನು ನನ್ನಿಂದ ಹೇಗೆ ತಪ್ಪಿಸಿಕೊಳ್ಳುವೆ ? ನಿನ್ನ ಕೋಪ ದರ್ಪ ಜೋರುಗಳೊಂದೂ ಇನ್ನು ನಡೆಯು



ಲಾರದು" ಎಂದು ಗಟ್ಟಿಯಾಗಿ ನೆಗಾಡಿದನು. ಹಸನ್ನಿಗೆ ವಿಪರೀತವಾಗಿ ಸಿಟ್ಟು ಬಂದು ಬಿಟ್ಟಿತು, "ನೀಚಾ ! ಮುದಿ ಸೈತಾನ್ ! ನನ್ನನ್ನು ಅಲ್ಲಾ ರಕ್ಷಿಸುತ್ತಾನೆ ! ನೋಡು ಅಲ್ಲಾನ ಸಹಾಯದಿಂದ ನಿನ್ನನ್ನು ಏನು ಮಾಡುವೆನೆಂಬುದನ್ನು !" ಎಂದವನೇ. ಒಂದು ಕೈಯಿಂದ ಮುದುಕನ ಕೈಯಲ್ಲಿದ್ದ ತಾಮ್ರದ ತಪ್ಪಲೆಯನ್ನು ಕಸಿದುಕೊಂಡು, ಇನ್ನೊಂದು ಕೈಯಿಂದ ಬಲವಾಗಿ ಅವನನ್ನು ದೂಡಿಬಿಟ್ಟನು. ಬೆಹ್ರಾಂ ಪಿಮ್ಮಗುಚಿ ಆಕಾಶದಲ್ಲಿ ಬೆಕ್ಕಿನ ಹಾಗೆ ತಟಪಟಾಯಿಸುತ್ತಾ, ಕೆಟ್ಟ ಸ್ವರದಿಂದ ಕೂಗಿ ಗುಡ್ಡದ ತಳದ ಕಲ್ಲುಗಳ ಮೇಲೆ ಬಿದ್ದು ಚಟ್ನಿಯಾಗಿ ಹೋದನು. ಸಾವಿರ ದೊಂಬೈನೂರು ಯುವಕರನ್ನು ಬಲಿ ಹಾಕಿದವನ ತಲೆಯು ಪುಡಿ ಭೂಮಿಗೆ ಬಲಿಯಾಯಿತು.

ಹಸನ್ ದುರ್ಮರಣದಿಂದ ತಪ್ಪಿದುದು ಮಾತ್ರವಲ್ಲದೆ, ಆಕಸ್ಮಿಕವಾಗಿ ಅಂಟಿಕೊಂಡ ಬೆಹ್ರಾಂನಂತಹ ಮಹಾಶತ್ರುವನ್ನು ಕೂಡಾ ಕೊನೆಗಾಣಿಸಿ ಆ ಗುಡ್ಡದ ತುದಿಯಲ್ಲಿ ನಿಂತಿದ್ದನು. ಅವನು ತನ್ನ ಕೈಯಲ್ಲಿದ್ದ ತಪ್ಪಲೆಯನ್ನು ತಿರುತಿರುಗಿಸಿ ನೋಡಿದನು. ಆದರೆ ಅದನ್ನು ಹೇಗೆ ಉಪಯೋಗಿಸುವುದೆಂದು ತಿಳಿಯದೆ, ಏನು ಮಾಡಿದರೆ ಏನಾಗುತ್ತದೋ ಎಂದು ಸಂಶಯ ಪಡುತ್ತ, ಅದನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡು, ಸುತ್ತಲೂ ಪರೀಕ್ಷಿಸಿ ನೋಡಿದನು.

ಅವನಿರುವ ಬೆಟ್ಟದ ಶಿಖರವು ಮೋಡಗಳ ಮಟ್ಟಕ್ಕಿಂತ ಎತ್ತರವಾಗಿದ್ದರೂ, ಆ ಪ್ರಾಂತವು ಬಹಳ ವಿಶಾಲವಾದ ಸಮತಲ ಪ್ರದೇಶವಾಗಿತ್ತು. ಎಲ್ಲಿಯೂ ಒಂದು ಮರವೋ ಪೊದರೋ ಇಲ್ಲ. ಬ್ರಹ್ಮಾಂಡದಂತಹ ಪಾದೆಗಲ್ಲಿನ ಮೈದಾನವದು. ಅದರ ಒಂದು ಕೊನೆಯಲ್ಲಿ ಹಸನ್ ಇದ್ದನು. ಅದರ ಇನ್ನೊಂದು ಕೊನೆಯನ್ನು ದಿಟ್ಟಿಸಿ ನೋಡುವಾಗ ಬೆಂಕಿಯು ಪ್ರಕಾಶವಿರುವಂತೆ ಕಂಡಿತು. ಮನುಷ್ಯರಿಲ್ಲದ ಕಡೆಯಲ್ಲಿ ಬೆಂಕಿ ಉರಿಯಲು ಸಾಧ್ಯವಿಲ್ಲವಷ್ಟೆ ? ಎಂದುಕೊಳ್ಳುತ್ತಾ ಹಸನ್ ಬೇಗಬೇಗನೆ ಆ ಪ್ರಕಾಶದ ಕಡೆಗೆ ನಡೆಯ ತೊಡಗಿದನು.

ಅವನು ಹತ್ತಿರ ಹೋದಂತೆ ಆ ಪ್ರಕಾಶವು ಒಂದು ಮಹಾ ಭವನವಾಗಿ ಬದಲಾವಣೆಗೊಂಡಿತು. ಆ ಭವನಕ್ಕೆ ನಾಲ್ಕು ಬ್ರಹ್ಮಾಂಡದಂತಹ ಸ್ತಂಭಗಳಿದ್ದುವು. ಅವುಗಳ ಮೇಲೆ ಗುಂಡಗಾದ ಗುಮುಟಗಳಿದ್ದುವು. ಆ ಸ್ತಂಭಗಳಿಗೂ. ಗುಮುಟಗಳಿಗೂ, ಭವನಕ್ಕೂ ಬಂಗಾರದ ರೇಕನ್ನು ಹೊದಿಸಲಾಗಿತ್ತು. ಸೂರ್ಯ ಕಾಂತಿಯಿಂದ ಆ ಬಂಗಾರವು ಬೆಂಕಿಯು ಉರಿಯು ಪ್ರಕಾಶದಂತೆ ಹಸನ್ನಿಗೆ ಕಂಡಿತ್ತು.

ಹಸನ್ ಮಾನಸಿಕವಾಗಿಯೂ, ಶಾರೀರಕವಾಗಿಯೂ ತುಂಬಾ ಬಳಲಿ ಹೋಗಿದ್ದನು. "ಈ ಭವನವನ್ನು ನೋಡುವಾಗ ಇದರಲ್ಲಿ ಮನುಷ್ಯರಿರುವ ಹಾಗೆ ಕಾಣುವುದಿಲ್ಲ. ಯಾವ ಯಕ್ಷರೋ, ಗಂಧರ್ವರೋ ಇರಬೇಕು, ಏನಾದರಾಗಲಿ. ದ್ವಾರ

ಪಾಲಕರನ್ನು ಬೇಡಿಕೊಂಡು ಕುಡಿಯಲು ಸ್ವಲ್ಪನೀರು ಕೇಳುತ್ತೇನೆ. ಯಾವ ಮೂಲೆಯಲ್ಲಾದರೂ ಸ್ವಲ್ಪ ಬಿದ್ದುಕೊಂಡು ನಿದ್ದೆ ಮಾಡುತ್ತೇನೆ " ಎಂದುಕೊಂಡು ಹಸನ್, ಹಸುರುಕಲ್ಲನ್ನು ಕೊರೆದು ಮಾಡಲ್ಪಟ್ಟ ಮಹಾದ್ವಾರವಲ್ಲಿ ಪ್ರವೇಶಿಸಿ ಭವನದ ಪ್ರಾಂಗಣಕ್ಕೆ ಕಾಲಿಟ್ಟನು. ಅಲ್ಲಿ ತುಸುನಿಂತು ಸುತ್ತಲೂ ನೋಡಿದನು: ಯಾರೂ ಕಾಣಲಿಲ್ಲ.

ಒಳಗೆ ನಾಲ್ಕಾರಡಿ ನಡೆಯಲು, ಇಬ್ಬರು ಕನ್ಯೆಯರು ಹಾಲುಗಲ್ಲಿನ ಮೇಜಿಯಲ್ಲಿ ಕುಳಿತು ಕೊಂಡು ಚದುರಂಗದ ಆಟದಲ್ಲಿರುವುದನ್ನು ನೋಡಿದನು. ಮೊದಲು ಅವರು ಹಸನ್ನನ್ನು ನೋಡಲಿಲ್ಲ. ಸ್ವಲ್ಪ ಹೊತ್ತಿಗೆ ಅವರಲ್ಲಿ ಚಿಕ್ಕವಳು ಅವನನ್ನು ಹಠಾತ್ತಾಗಿ ನೋಡಿ, " ಅಕ್ಕಾ, ಯಾವನೋ ಒಬ್ಬ ಹುಡುಗ ಬಂದಿದ್ದಾನೆ ನೋಡು. ದುಷ್ಟನಾದ ಬೆಹ್ರಾಂ ವರ್ಷಕ್ಕೊಮ್ಮೆ ಇಂತಹ ಯುವಕರನ್ನು ಈ ಮೋಡದ ಬೆಟ್ಟಕ್ಕೆ ತರುತ್ತಾ ಇರುತ್ತಾನೆ. ಈ ಹುಡುಗನನ್ನು ಕೂಡಾ ಅವನೇ ತಂದನೇನೋ? ಹಾಗಿದ್ದರೆ ಇವನು ಆ ಮಾಯದವನ ಕೈಯಿಂದ ಹೇಗೆ ತಪ್ಪಿಸಿಕೊಂಡು ಬಂದಿರಬಹುದು ? ಬಹಳ ಆಶ್ಚರ್ಯ ! " ಎಂದಳು.

ಕೂಡಲೇ ಹಸನ್ ಅವಳ ಮುಂದೆ ಅಡ್ಡ ಬಿದ್ದು, " ಅಮ್ಮಾ, ನಾನು ಅಂತಹ ನಿರ್ಭಾಗ್ಯದವನೇ ನಿಜ!" ಎಂದು ಕಣ್ಣೀರು ತುಂಬಿಕೊಂಡನು. ಪರಿಸ್ಥಿತಿ ಅವಳಿಗೆ ಅರ್ಥವಾದುದರಿಂದ, ಹಸನ್ನನ ಮೇಲೆ ಅವಳಿಗೆ ತುಂಬಾ ಮನಸ್ಸು ಕರಗಿತು,

ಅಂತಲೇ ಅವಳು ತನ್ನ ಅಕ್ಕನೊಂದಿಗೆ, " ಅಕ್ಕಾ, ನಾನು ಈ ಹುಡುಗನನ್ನು ನನ್ನ ತಮ್ಮನ ಹಾಗೆ ಬೆಳೆಸಿ ಕೊಳ್ಳುತ್ತೇನೆ. ಅದಕ್ಕೆ ನೀನೇ ಸಾಕ್ಷಿ." ಎಂದಳು. ಆ ಮಾತು ಕೇಳಿ ಸಾವುಬದುಕುಗಳ ಅಂಚಿನಲ್ಲಿದ್ದ ಹಸನ್ನನ ಜೀವ ಸ್ಥಿಮಿತಕ್ಕೆ ಬಂತು.

ಆಮೇಲೆ ಅವಳು ಹಸನ್ನನ್ನು ಭವನದೊಳಗೆ ಕರೆದುಕೊಂಡು ಹೋಗಿ, ಅವನಿಗೆ ಸೊಗಸಾಗಿ ಸ್ನಾನ ಮಾಡಿಸಿ, ಅವನ ಹಳೆಯ ದುಸ್ತುಗಳನ್ನು ತೆಗೆಯಿಸಿ, ಒಳ್ಳೆಯ ಪೋಷಾಕುಗಳನ್ನು ಕೊಟ್ಟಳು.

ಅನಂತರ ಆ ಅಕ್ಕತಂಗಿಯರು ಅವನನ್ನು ತಮ್ಮ ಮಧ್ಯದಲ್ಲಿ ಕುಳ್ಳಿರಿಸಿಕೊಂಡು ಸೊಗಸಾಗಿ ಭೋಜನ ಮಾಡಿಸಿದರು.

ಅದೆಲ್ಲಾ ಮುಗಿದ ಮೇಲೆ ಹಸನ್ ಅವರೊಂದಿಗೆ, " ಅಕ್ಕಗಳಿರಾ, ನೀವು ನನ್ನ ಕಣ್ಣಿಗೆ ಬೀಳುವ ಮೊದಲು ನಾನು ತುಂಬಾ ಕಷ್ಟಗಳಿಗೆ ಗುರಿಯಾದೆನು." ಎಂದು ತಾನು ಯಾರು ಏನೆಂಬ ವಿವರವನ್ನೆಲ್ಲಾ ಅವರೊಂದಿಗೆ ಮುಚ್ಚುಮರೆಮಾಡದೆ ಹೇಳಿದನು.

(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫
### ಗೆದ್ದ ಶೀರ್ಷಿಕೆಗಳು ೧೯೮೨ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Ravindra S. Kamboj





M. Natarajan

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಡಿಸೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ:

**ಮೊದಲನೇ ಫೋಟೋ: ಈ ಜೋರಿನವನಿಗೆ ಜೋಡು**

**ಎರಡನೇ ಫೋಟೋ: ಈ ಜೋಳಿಗೆಯು ಜೋಗಿಯೋ? ಪಾಪ!**

ಕಳುಹಿಸಿದವರು: ಪಿ. ಎನ್. ರಾಜಶ್ರೀ

೨೩, ರಘುನಾಯಕುಲು ಸ್ಟ್ರೀಟ್, ಮದರಾಸು-೬೦೦ ೦೦೩.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




# ನ್ಯೂಟ್ರಿನ್ ರೋಲ್ಸ್,
# ಆಹಾ! ಅದೆಷ್ಟು ತಾಜಾ,
# ಹೊಸ ರುಚಿ!










ಅತ್ಯಧಿಕ ಶ್ರೇಣಿಯಲ್ಲಿ, ಕರಕರನೆ
ಸವಿಯಲು, ಮಧುರ ರೋಲ್‌ಗಳು






CAS/NC/56/81 KAN A

ಪ್ರತಿನಿತ್ಯವು ಮಿಠಾಯಿ-
ರಸದೌತಣ ನಂಬಾಯಿ!




ನ್ಯೂಟ್ರಿನ್ ಕನ್‌ಫೆಕ್ಷನರಿ ಕಂಪನಿ ಲಿಮಿಟೆಡ್, ಚಿತ್ತೂರು-517 002 (ಆಂಧ್ರಪ್ರದೇಶ್)

ಎಲ್ಲಾ ಪತ್ರಿಕೆ ಅಂಗಡಿಗಳಲ್ಲೂ ಲಭ್ಯ

**ನಿಮ್ಮ ನೆಚ್ಚಿನ ಚಂದಮಾಮ ಅರ್ಪಿಸುವ ಮತ್ತೊಂದು ಸ್ವಾರಸ್ಯಕರ ವಿಕಟ ಚಿತ್ರಾವಳಿ, ಕ್ಲಾಸಿಕ್ಸ್ ಅಂಡ್ ಕಾಮಿಕ್ಸ್**

ಮನೋರಂಜಕ, ಸ್ವಾರಸ್ಯಪೂರ್ಣ ವರ್ಣರಂಜಿತ ಕಾಮಿಕ್ಸ್ ಕೇವಲ ರೂ. 2/- ವಾರ್ಷಿಕ ಚಂದಾ ಕೇವಲ ರೂ. 48/-






**ವಾಲ್ಟ್ ಡಿಸ್ನಿಯವರ**

# ವಿಚಿತ್ರ ಪ್ರಪಂಚ

ಕಾಮಿಕ್ಸ್‌ಗಳಲ್ಲಿ ಒಂದು ಹೊಸ ಕಲ್ಪನೆ

7116 KN

ಜೀವನ್ ಹ[illegible]ಮರ ತೀ[illegible]

# ಆರೋಗ್ಯವೇ ಭಾಗ್ಯ



ವ್ಹಾ! ವಿಚಿತ್ರವಲ್ಲವೇ ನಮ್ಮೀ ಜೀವನ?

ಹಾಗೇಕನ್ನುತ್ತೀ, ಏನಾಯ್ತೀಗ?

ನೋಡು, ಈತನಕ ನಾವೆಷ್ಟೋ ಮಾನಸಿಕ ಮಹಾಸಾಧನೆಗಳು ಹಾಗೂ ದೈಹಿಕ ಅದ್ಭುತ-ಕಾರ್ಯಗಳ ಬಗ್ಗೆ ತಿಳಿದುಕೊಂಡೆವು. ಆದರೆ ಅಂತಹ ಖ್ಯಾತಿ ಗಳಿಸಲು ಎಂದೆಂದೂ ನನ್ನಿಂದ ಸಾಧ್ಯವಿಲ್ಲವಲ್ಲಾ ಎಂದಷ್ಟೇ ಕೊರೆಯುತ್ತಿದ್ದೇನೆ.

ಏ ಹನು, ಏಳೋ, ಪ್ರಸನ್ನಚಿತ್ತನಾಗೋ! ಜಾಗತಿಕ ದಾಖಲೆ ಪುಸ್ತಕಗಳಲ್ಲಿ ಒಮ್ಮೆಲೆ ತನ್ನ ಹೆಸರು ಕಾಣುವ ತರಾತುರಿಯೇಕೆ? ನಮ್ಮ ಪ್ರಥಮ ಲಕ್ಷ್ಯ ನಿರೋಗಿ ಶರೀರ ವ ಚಿತ್ತಸ್ವಾಸ್ಥ್ಯ ಇವಕ್ಕಷ್ಟೇ ಸೀಮಿತವಾಗಿದ್ದರೆ ಸಾಲದೆ?

ಅಷ್ಟರಿಂದ ಒಂದು ಪಾರಿತೋಷಕವಂತಿರಲಿ ಕಡಿಮೆ ಪಕ್ಷ ಒಂದು ಬಾಳೆಹಣ್ಣಿನ ಸಿಗೊಸೆಯಾದರೂ ದೊರೆಯಬಹುದೆ ನನಗೆ

ಏನಿಲ್ಲವೆಂದರೆ ನೀನು ದೀರ್ಘಾಯುಷಿಯಾಗುವುದರಲ್ಲಂತೂ ಸಂಶಯವಿಲ್ಲ;
ಅದೇನು ಸಣ್ಣ ಸಾಧನೆ?

ಏಯ್, ನಿಲ್ಲು ನಿಲ್ಲು! ದೀರ್ಘಾಯುಷ್ಯ ಜೀವ ವಿಮೆಗೆ ಹೇಗೋ ಸಂಬಂಧಿಸಿದೆಯಲ್ಲ?

ನಿಸ್ಸಂದೇಹವಾಗಿ. ಹನುಮ, ಯಥಾರ್ಥವಾಗಿ ಹೇಳುವುದಾದರೆ
ಜೀವವಿಮೆ ಅಸಂಖ್ಯ ಜನರ ಜೀವಾವಧಿಗಳ ಅಧ್ಯಯನದ ಫಲ.

ಹಾಗೋ, ಸರಿ ನಾನಿನ್ನೂ ಕೇವಲ ಬಾಲಕನಷ್ಟೆ. ಜೀವವಿಮೆಯ ಚಿಂತೆ ನನಗ್ಯಾಕೆ

ನೀನದನ್ನು ತಿಳಿಯಬಯಸುವುದರಲ್ಲಿ ತಪ್ಪೇನಿಲ್ಲ, ನಿನ್ನ ಪೋಷಕನಾದ ನಾನಂತೂ ತಿಳಿಯಲೇ ಬೇಕು.

ಅದೇಕೆ?

ನಿನ್ನ ಭವಿಷ್ಯದ ರಕ್ಷಣೆ.... ನನ್ನ ಕರ್ತವ್ಯ. "ಚಿಲ್ಡ್ರನ್ಸ್ ಆಂಟಿಸಿಪೇಟೆಡ್" ಪಾಲಿಸಿ,
"ಚಿಲ್ಡ್ರನ್ಸ್ ಡಿಫರ್ಡ್" ಪಾಲಿಸಿ, "ಎಜುಕೇಷನಲ್ ಎನ್ಯುಟಿ" ಪಾಲಿಸಿ. 'ಮ್ಯಾರೇಜ್
ಎಂಡೋಮೆಂಟ್ ಪಾಲಿಸಿ" ಮುಂತಾಗಿ ಜೀವವಿಮೆಯ ಅನೇಕ ಪಾಲಿಸಿಗಳಿವೆ.
ಮಾತಾಪಿತೃಗಳು ಪೋಷಕರೆಲ್ಲರೂ ಈ ಪಾಲಿಸಿಗಳ ಬಗ್ಗೆ
ತಿಳಿಯುವುದು ಆವಶ್ಯಕ

ಎಲ್ಲಿಂದ ? ಹೇಗೆ?

ಈ ವಿಮಾಯೋಜನೆಗಳ ಬಗ್ಗೆ ಅವುಗಳ ಕಾರ್ಯವಿಧಾನಗಳ
ಬಗ್ಗೆ ಜೀವವಿಮಾ ಏಜೆಂಟರನ್ನು ವಿಚಾರಿಸಿ.

ಹಾಗಾದರೆ ತಡವೇಕೆ? ಈಗಲೇ ನನ್ನನ್ನು ನಿನ್ನ ಪರಿಚಯದ ಎಲ್.ಐ.ಸಿ. ಏಜೆಂಟರಲ್ಲಿಗೆ ಕರೆದೊಯ್ಯು






## ಭಾರತೀಯ ಜೀವವಿಮಾ ನಿಗಮ

daCunha/LIC/120/81 KAN